# ಕೊಡಗು ಸಂಗಾತಿ

ಅಕ್ಟೋಬರ್ 1 ರಿಂದ 15, 1999 ಪಾಕ್ಷಿಕ ಪತ್ರಿಕೆ (ನಿರ್ಗಾಲ್ 14 – 28ರತನಕ, 1999)

ನಂ. ೩೫, ಸವಿತಾ ನಿಲಯ, ೧ನೇ ಕ್ರಾಸ್, ೪ನೇ ಬ್ಲಾಕ್, ಜಯಲಕ್ಷ್ಮಿಪುರಂ, ಮೈಸೂರು - ೫೭೦ ೦೧೨

ಸಂಪಾದಕಿ : ಪಟ್ಟಡ ಶೀಲಾಮಣಿ

ಕನ್ನಡ ಮತ್ತು ಅರೆಭಾಷೆಯ ಏಕೈಕ ಪಾಕ್ಷಿಕ ಪತ್ರಿಕೆ

K.R. N. N. 240 ಸಂಪುಟ : 3 ಸಂಚಿಕೆ : 19 ಪುಟಗಳು : 24 ಬೆಲೆ ರೂ. : 5-00




ಪವಿತ್ರಮಾತೆಯೂ ದೇಶೋದ್ಧಾರಕಳೂ ಪರಮ ಪೂಜ್ಯಳು, ಚತುರ್ಮುಖ ಬ್ರಹ್ಮನ ದತ್ತು ಪುತ್ರಿಯೂ, ತ್ರಿಲೋಕ ಸುಂದರಿಯೂ ಆದ ಜಗನ್ಮಾತೆ ಶ್ರೀ ಶ್ರೀ ಶ್ರೀ ಕಾವೇರಿ ಮಾತೆ.

ಕೊಡಗು ಸಂಗಾತಿಯ ಓದುಗರಿಗೂ, ಚಂದಾದಾರರಿಗೂ,

ಹಿತೈಷಿಗಳಿಗೂ ಕಾವೇರಿ ಸಂಕ್ರಮಣದ ಶುಭಾಶಯಗಳು

## ಶುಭ ಹಾರೈಕೆ



ಶ್ರೀ ಆದಿಚುಂಚನಗಿರಿ ಮಹಾಸಂಸ್ಥಾನ ಮಠದ ಪೀಠಾಧ್ಯಕ್ಷರಾದ ಪರಮಪೂಜ್ಯ ಜಗದ್ಗುರು ಶ್ರೀ ಶ್ರೀ ಶ್ರೀ ಬಾಲಗಂಗಾಧರನಾಥ ಮಹಾಸ್ವಾಮಿಗಳವರ ಪಟ್ಟಾಭಿಷೇಕ ರಜತ ಮಹೋತ್ಸವ ಸಮಾರೋಪ ಸಮಾರಂಭಕ್ಕೆ ಶುಭ ಹಾರೈಕೆಗಳು. ಇವರ ಪರಮ ಸೇವೆಯು ಪಶ್ಚಿಮ ಘಟ್ಟದ ಅರೆಭಾಷಿಕರ ನಾಡಿಗೆ ಲಭ್ಯವಾಗಲೆಂದು ಶುಭ ಹಾರೈಸುವ

ಪಟ್ಟಡ ಪ್ರಭಾಕರ ಮತ್ತು ಪಟ್ಟಡ ಶೀಲಾಮಣಿ

## ನಾಪೋಕ್ಲುವಿನಲ್ಲಿ ಸೈನ್ಯಕ್ಕೆ ಭರ್ತಿ

ನಾಪೋಕ್ಲುವಿನ ಜೂನಿಯರ್ ಕಾಲೇಜು ಮೈದಾನದಲ್ಲಿ ಅಕ್ಟೋಬರ್ 8ರಂದು ಜಿಲ್ಲೆಯ ಯುವಕರನ್ನು ಸೈನ್ಯಕ್ಕೆ ಭರ್ತಿ ಮಾಡಿಕೊಳ್ಳಲಾಗುವುದು. ಸೈನ್ಯಕ್ಕೆ ಸೇರಲಿಚ್ಛಿಸುವವರು 16ರಿಂದ 23ವರ್ಷದ ವಯೋಮಿತಿಯೊಳಗಿದ್ದು, ಎಸ್.ಎಸ್.ಎಲ್.ಸಿ. ಉತ್ತೀರ್ಣರಾಗಿರಬೇಕು. 50 ಕೆ.ಜಿ. ತೂಕ, 165 ಸೆಂಟಿಮೀಟರ್ ಎತ್ತರ, 77-82 ಸೆ. ಮೀ. ಎದೆಯಳತೆಯಿರಬೇಕು, ಸಂದರ್ಶನಕ್ಕೆ ಹಾಜರಾಗುವವರು ವಿದ್ಯಾರ್ಹತೆಯ ಮೂಲ ಪ್ರಮಾಣ ಪತ್ರ ಹಾಗೂ ಜೆರಾಕ್ಸ್ ಪ್ರತಿ, 8 ಪಾಸ್‌ಪೋರ್ಟ್ ಅಳತೆಯ ಭಾವಚಿತ್ರದೊಂದಿಗೆ ಅಂದು ಬೆಳಿಗ್ಗೆ 7 ಗಂಟೆಗೆ ಹಾಜರಾಗಬಹುದು.

**ವಿನಾಯಿತಿ**

ಯುದ್ಧದಲ್ಲಿ ಮಡಿದ ಯೋಧರ ಗಂಡುಮಕ್ಕಳಿಗೆ ಹಾಗೂ ಸಹೋದರರಿಗೆ ಸೈನ್ಯಕ್ಕೆ ಸೇರಲು ವಿನಾಯಿತಿ ನೀಡಲಾಗಿದ್ದು, ವಿದ್ಯಾರ್ಹತೆ, ವಯೋಮಿತಿ, ದೇಹದಾರ್ಢ್ಯತೆ ಮತ್ತು ವೈದ್ಯಕೀಯ ವಿಷಯಗಳನ್ನು ಹೊರತುಪಡಿಸಿ ಪೂರ್ವಭಾವಿ ಪರೀಕ್ಷೆಯಿಲ್ಲದೆ ಸೇನೆಗೆ ಸೇರಲು ಅವಕಾಶ ನೀಡಲಾಗುವುದು.

## ಕೊಡಗು ಸಂಗಾತಿ ಪಾಕ್ಷಿಕ ಪತ್ರಿಕೆ ಇನ್ನು ಲಭ್ಯವಿಲ್ಲ

ಕೊಡಗು ಸಂಗಾತಿ ಪಾಕ್ಷಿಕ ಪತ್ರಿಕೆಯ ಕೊಡಗುನಾಡಿನ ಚಂದದಾರರಾಗಿದ್ದು 31-12-1998ರ ತನಕ ನವೀಕರಿಸದೆ ಇರುವ ಸುಮಾರು 429 ಚಂದದಾರರಿಗೆ ಸಂಗಾತಿ ಪತ್ರಿಕೆಯನ್ನು ದಿನಾಂಕ 1-10-1999 ರಿಂದ ನಿಲ್ಲಿಸಲಾಗಿದೆ. ಎಂ.ಓ. ಅಥವಾ ಡಿ.ಡಿ. ಕಳುಹಿಸಿದಲ್ಲಿ ಅಂತವರಿಗೆ ಪುನಃಹ ನವೀಕರಿಸಲಾಗುವುದು

– ಸಂಪಾದಕಿ

## ಅರೆಭಾಷಿಕ ಮಾಜಿ ಸೈನಿಕರ ಸಹಕಾರ ಸಂಘ, ಮೈಸೂರು

ಈ ಮೇಲ್ಕಂಡ ಸಂಘವನ್ನು ಸ್ಥಾಪಿಸುವ ಉದ್ದೇಶದಿಂದ ದಿನಾಂಕ 18-9-1999ರಂದು ಮೈಸೂರಿನ ಜಯಲಕ್ಷ್ಮಿಪುರಂ ಗೌಡ ವಿದ್ಯಾರ್ಥಿನಿಲಯದಲ್ಲಿ ಸಭೆಯನ್ನು ಕರೆದಿರುವುದು ಸರಿಯಷ್ಟೆ. ಅನಿವಾರ್ಯವಾಗಿ ಸದ್ರಿ ಸಭೆಯಲ್ಲಿ ಕಟ್ಟುನಿಟ್ಟಿನ ನಡಾವಳಿಕೆಯನ್ನು ತೆಗೆದುಕೊಳ್ಳಲಾಗಲಿಲ್ಲ. ಸಭೆಯ ಅಭಿಪ್ರಾಯದಂತೆ ಇದೇ ತಿಂಗಳ 24ರಲ್ಲಿ, ಮೇಲ್ಕಂಡ ಸ್ಥಳದಲ್ಲಿ ಭಾನುವಾರ ಬೆಳಿಗ್ಗೆ 11 ಗಂಟೆಗೆ ಕರೆಯಲಾಗಿದೆ. ಸರ್ವ ಮಾಜಿ ಸೈನಿಕರು ಸಕಾಲದಲ್ಲಿ ಭಾಗವಹಿಸಿ ಯಶಸ್ವಿಯಾಗಿ ನಡೆಸಿಕೊಡುವಂತೆ ಕೋರಲಾಗಿದೆ.

ಸಂಘಟನಾ ಕಾರ್ಯದರ್ಶಿ

ಕರ್ಣಯ್ಯನ ಲಕ್ಷ್ಮಣ,

ಮೈಸೂರು ದೂರವಾಣಿ : 489052

# ಕೊಡಗು ಸಂಗಾತಿ

ಸಂಪಾದಕಿ, ಪ್ರಕಾಶಕಿ :
**ಪಟ್ಟಡ ಪಿ. ಶೀಲಾಮಣಿ**

ಗೌರವ ಸಂಪಾದಕ :
**ಪಟ್ಟಡ ಎಂ. ಪ್ರಭಾಕರ**

ಚಂದಾ ಕಳುಹಿಸುವ ಮತ್ತು
ಜಾಹೀರಾತು ಪ್ರಸಾರ ಕಛೇರಿ :

**ಕೊಡಗು ಸಂಗಾತಿ**
ನಂ. 35, "ಸವಿತಾ ನಿಲಯ"
1ನೇ ಕ್ರಾಸ್, 4ನೇ ಬ್ಲಾಕ್,
ಜಯಲಕ್ಷ್ಮಿಪುರಂ, ಮೈಸೂರು - 570 012.
**ಫೋನ್ : 0821/516771**

**ಮಡಿಕೇರಿಯಲ್ಲಿ ಸಂಗಾತಿ ಕಛೇರಿ**

**ಬೈತಡ್ಕ ಜಾನಕಿ ಬೆಳ್ಯಪ್ಪ**
ನಂ. 21-16 ಎಲ್. ಐ. ಸಿ. ಹತ್ತಿರ
ರೇಸ್ ಕೋರ್ಸ್ ರಸ್ತೆ, ಮಡಿಕೇರಿ
ದೂರವಾಣಿ : 08272/28047

**ಸಂಪರ್ಕಿಸುವ ವಿಳಾಸ**

**ಮಣಿ ನಂಗಾರ್**
ಹೊಳ್ಳ ಕಾಂಪ್ಲೆಕ್ಸ್, ಮಂಗಳೂರು ರಸ್ತೆ,
ಚಿಕ್ಕಪೇಟೆ, ಮಡಿಕೇರಿ - 571 201
ದೂರವಾಣಿ : 08272/29372

**ಕುಂಭಗೌಡನ ಸೋಮಣ್ಣ**
ಮಯೂರ ಕೋಲ್ಡ್ ಸ್ಟೋರೇಜ್
ಮುಖ್ಯ ರಸ್ತೆ, ಕುಶಾಲನಗರ - 571 234
ದೂರವಾಣಿ : 08276/73370 (R.)

**ಅಮ್ಮಾಜೀರ ಪೊನ್ನಪ್ಪ**
20, 1ನೇ ಮೈನ್, 4ನೇ ಕ್ರಾಸ್
ಸಾಕಮ್ಮ ಗಾರ್ಡನ್ಸ್, ಬಸವನಗುಡಿ,
ಬೆಂಗಳೂರು - 04
ದೂರವಾಣಿ - 080/6342822

**ಕಲ್ಲುಮುಟ್ಲು ಬಸಪ್ಪ C/o ನಾರಾಯಣ**
ನಂ. 233/9, 2ನೇ ಕ್ರಾಸ್, ನಂಜಪ್ಪ ಬ್ಲಾಕ್,
ಕೆಂಪೇಗೌಡ ನಗರ, ಬೆಂಗಳೂರು - 19
ದೂರವಾಣಿ - 080/6549669





- ಸಂಪಾದಕೀಯ : ಅಳಿದು ಹೋಗುತ್ತಿರುವ ಯಾಲಕ್ಕಿ 02
- ಕವನ : ಜಯ ಭಾರತ, ಪ್ರೀತಿಯ ಮೊಮ್ಮಗಳಿಗೆ ತಾತನ ಹಾರೈಕೆ 02
- ಆರೋಗ್ಯ ಚಿಂತನೆ : ಸುಟ್ಟ ಗಾಯಗಳು 03
- ಪರಿಶುದ್ಧ ಗೌಡ ಜನಾಂಗ, ಕವನ : ಬಾಳಿನ ಸಂಗಾತಿ 04
- ಕೊಡಗಿನ ಬ್ರಹ್ಮಗಿರಿಯ ಮಡಿಲಲ್ಲಿ ಅಕ್ಟೋಬರ್ 18ರಂದು ಜಗನ್ಮಾತೆ ಆದಿ ಶ್ರೀ ಕಾವೇರಿಯ ತೀರ್ಥೋದ್ಭವ 05
- ಪ್ರೆಷರ್ ಕುಕ್ಕರ್‌ನಲ್ಲಿ ಪದಾರ್ಥಗಳು ಬೇಗನೆ ಬೇಯುವುದು ಹೇಗೆ? 07
- ಬೆಂಗಳೂರಿನ ಹೊರವಲಯದಲ್ಲಿ ವರ್ಣರಂಜಿತ ನಾಡು ಕಾವೇರಿನಾಡಿನ ಸಂಸ್ಥಾಪಕ ಅಮ್ಮಾಜೀರ ಪೊನ್ನಪ್ಪ ದಂಪತಿಗಳ ನಾಲ್ಕನೆ ವೈಯುಕ್ತಿಕ ಜನ ಸಂಘಟನೆ ಮನಸ್ಸಿಗೆ ಮುದ ನೀಡಿದ ಕೈಲ್ ಪೋಳ್ದ್ ಹಬ್ಬ 08
- ನಗೆಹನಿ 11
- ದಕ್ಷಿಣ ಕರ್ನಾಟಕದ ಸಾಂಸ್ಕೃತಿಕ ನೆಲೆವೀಡು, ಕಲ್ಲು ಕಲ್ಲು ಕತೆ ಹೇಳುತ್ತಿರುವ ನಾಡು ಗಡಿನಾಡ ಜಿಲ್ಲೆ ಹಾಸನದಲ್ಲಿ ಕೈಲ್‌ಪೋಳ್ದ್ ಹಬ್ಬ, ಸ್ಫೂರ್ತಿಗೊಂಡ ಜನತೆ 12
- ಸರ್ಪಗಂಧ - ಧಾರವಾಹಿ - 15 13
- ಸಣ್ಣಕಥೆ : ಚಿನ್ನದ ಪಂಜರ 15
- ಮರಗೋಡುವಿನಲ್ಲಿ ವಿಜೃಂಭಿಸಿದ ಕೈಲ್ ಪೋಳ್ದ್ ಹಬ್ಬ, ಕವನ 16
- ಗೌಡರು ಯಾರು : ಎಲ್ಲಿಂದ? ಎಲ್ಲಿಗೆ? 18
- ಗೌಡ ಮತ್ತು ಒಕ್ಕಲಿಗರ ಗೋತ್ರ ಹಾಗೂ ಪದ್ಧತಿಗಳ ಸೂಕ್ಷ್ಮ ಪರಿಚಯ, ಗೋತ್ರ ಯಾ ಬಳಿಗಳು 19


## ಅರೆಭಾಷಿಕ ವಿಭಾಗ


- ಕುಂಞಣ್ಣ ಗೂಡೆನ ನೋಡಿಕೆ ಹೋದ್...... 06
- ಕರಿಚಿನ್ನ - ಧಾರವಾಹಿ - 32 10
- ನಗೆಹನಿ 11
- "ಹಂಗಿನ ಅರಮನೆಗಿಂತ ವಿಂಗಡದ ಗುಡಿ ಲೇಸು" 14
- ನಗೆಹನಿ 20


## ಚಂದಾ ವಿವರ

| | | |
|---|---|---|
| ಜೀವಾವಧಿ ಸದಸ್ಯತನ | - | **2000 ರೂ.** |
| ವಾರ್ಷಿಕ ಚಂದಾ | - | **120 ರೂ.** |
| ಅರ್ಧ ವಾರ್ಷಿಕ | - | **60 ರೂ.** |
| ಬಿಡಿ ಪ್ರತಿ | - | **5 ರೂ.** |

# ಸಂಪಾದಕೀಯ : ಅಳಿದು ಹೋಗುತ್ತಿರುವ ಯಾಲಕ್ಕಿ :

ಕೊಡಗಿನ ನೈಸರ್ಗಿಕ ಸಂಪತ್ತಿನಲ್ಲೊಂದಾದ ಯಾಲಕ್ಕಿ ದಿನದಿಂದ ದಿನಕ್ಕೆ ಕ್ಷೀಣಿಸುತ್ತಿರುವುದು ದುರದೃಷ್ಟಕರ ಸಂಗತಿ. ಕೊಡಗಿನ ಮಲೆಗಳಲ್ಲಿ ಬೆಳೆಯುತ್ತಿದ್ದ ಯಾಲಕ್ಕಿ ಹಲವಾರು ಕಾರಣಗಳಿಂದ ದಿನದಿಂದ ದಿನಕ್ಕೆ ಕಡಿಮೆಯಾಗುತ್ತಿದೆ. ಮಲೆಗಳಲ್ಲಿ ಇರುವ ಮರ ಸಂಪತ್ತು ಮರ ಕಳ್ಳರ ದೆಸೆಯಿಂದಲೂ ಜನರಲ್ಲಿ ಹಣದ ಆಸೆಯಿಂದ ಮಲೆಗಳ ಹಾಗೂ ಸ್ವಂತ ಕಾಡುಗಳ ಮರಗಳನ್ನು ಕಡಿದು ನಾಶ ಮಾಡಿದುದರಿಂದ ಯಾಲಕ್ಕಿ ಬೆಳೆಯುವ ಬದಲು ಕಾಫಿ ಬೆಳೆಸುತ್ತಿದ್ದಾರೆ. ಈ ವಿಧದ ನಡಾವಳಿಕೆ ಚಿನ್ನದ ಮೊಟ್ಟೆ ಇಡುವ ಬಾತುಕೋಳಿಯನ್ನು ಒಂದೇ ಸಲಕ್ಕೆ ತುಂಬಾ ಮೊಟ್ಟೆಗಳು ಸಿಗಬಹುದೆಂಬ ಆಸೆಯಿಂದ ಬಾತನ್ನೇ ಕೊಂದ ಪರಿಸ್ಥಿತಿಯಾಗಿದೆ. ಇದರಲ್ಲಿ ಜನರಿಗೆ ನಮ್ಮ ವನಸಂಪತ್ತು ನಾಶವಾಗುತ್ತದೆಂಬ ಪ್ರಜ್ಞೆ ಇಲ್ಲದಾಗಿದೆ. ತಾನು ಬದುಕಿ ಬಾಳಿದರಾಯಿತು. ತನ್ನ ಪೀಳಿಗೆಗೆ ವನ ಸಂಪತ್ತಿನ ಅವಶ್ಯಕತೆಯೇ ಇಲ್ಲವೇನೋ ಎಂಬ ಅಭಿಪ್ರಾಯ ಪಟ್ಟಂತಾಗಿದೆ.

ಇದರಿಂದಾಗಿ ಕೊಡಗಿನಲ್ಲಿ ಹಣವನ್ನು ಕೊಡುತ್ತಿದ್ದ ಬೆಳೆ ನಾಶವಾಗುತ್ತಾ ಇದೆ. ಇನ್ನು ಹತ್ತಾರು ವರ್ಷಗಳು ಕಳೆದ ನಂತರ ಯಾಲಕ್ಕಿಯನ್ನು ಪರದೇಶಗಳಿಂದ ಆಮದು ಮಾಡಿಕೊಳ್ಳುವ ಸ್ಥಿತಿ ಉಂಟಾಗುತ್ತದೆ. ವಿಷಯವನ್ನು ಸರ್ಕಾರ ಹಾಗೂ ಜನತೆ ತೀವ್ರ ಗತಿಯಿಂದ ಯೋಚಿಸದೇ ಇರುವುದು ಶೋಚನೀಯ ಸಂಗತಿಯಾಗಿದೆ.

ಯಾವ ರೀತಿ ಭತ್ತ ಹಾಗೂ ಗೋಧಿ ಮುಂತಾದ ಬೆಳೆಗಳ ಬೆಲೆ ಕುಸಿಯದಂತೆ ಸರ್ಕಾರ ಕನಿಷ್ಠ ಬೆಲೆಯನ್ನು ನಿಗದಿ ಪಡಿಸುವಂತೆ ಯಾಲಕ್ಕಿಗೂ ರೇಟಿನ ಕೂಲಿ ಹಾಗೂ ಗೊಬ್ಬರದ ಬೆಲೆಗನುಸಾರವಾಗಿ ಸರ್ಕಾರ ಕನಿಷ್ಠ ಬೆಲೆಯನ್ನು ನಿಗದಿ ಪಡಿಸಬೇಕು. ಕಟ್ಟೆ ರೋಗ ಮುಂತಾದವುಗಳಿಂದ ನಾಶವಾಗುವ ಸಂದರ್ಭದಲ್ಲಿ ಇನ್ಶೂರೆನ್ಸ್ ಸಲಕರಣೆಯನ್ನು ಮಾಡಬೇಕು. ಬೆಳೆಗಾರರು ತಮ್ಮ ಹಿಡುವಳಿಗಳಲ್ಲಿ ಹೆಚ್ಚಿನ ರೀತಿಯಲ್ಲಿ ಫಸಲನ್ನು ತೆಗೆಯುವಂತೆ ಪ್ರೋತ್ಸಾಹಿಸುವುದಕ್ಕಾಗಿ ಎಕ್ರೆಗೆ ಅತೀ ಹೆಚ್ಚು ಬೆಳೆದ ರೈತರಿಗೆ ಪ್ರಶಸ್ತಿಯನ್ನು ಕೊಡುವ ಏರ್ಪಾಡುಗಳಿಂದ ಬೆಳೆಗಾರರನ್ನು ಪ್ರೋತ್ಸಾಹಿಸುವ ಏರ್ಪಾಡುಗಳಿಂದಲೂ ಹೆಚ್ಚು ಇಳುವರಿ ಬರುವ ಯಾಲಕ್ಕಿ ತಳಿಗಳನ್ನು ಸಂಶೋಧನೆ ಮಾಡಿ ಬೆಳೆಗಾರರಲ್ಲಿ ಅಭಿರುಚಿ ಹುಟ್ಟುವಂತೆ ಮಾಡಬೇಕು. ಯಾಲಕ್ಕಿ ಮಾರುಕಟ್ಟೆಯನ್ನು ದಳ್ಳಾಳಿಗಳ ವಶಕ್ಕೆ ಕೊಡದೆ ಯಾಲಕ್ಕಿ ಬೆಳೆಯುವ ನಿಗಮ ಅಥವಾ ಸರ್ಕಾರ ವಹಿಸಿಕೊಂಡು ಕಾರ್ಯ ಪ್ರವೃತ್ತರಾಗಬೇಕು.

ಈ ರೀತಿಯ ವ್ಯವಸ್ಥೆ ಆಗದಿದ್ದರೆ ನಿಸರ್ಗದತ್ತವಾದ ಕೊಡಗಿನ ವನ ಸಂಪತ್ತು ಹಾಳಾಗಿ ನಮ್ಮಲ್ಲೇ ಬೆಳೆಯುತ್ತಿದ್ದ ವಸ್ತುವನ್ನು ಪರದೇಶಗಳಿಂದ ತರಿಸಿಕೊಳ್ಳುವ ಸಂದರ್ಭವನ್ನು ತಪ್ಪಿಸಬಹುದೆಂದು ಸಂಗಾತಿಯ ಅನಿಸಿಕೆ.

## ಜಯ ಭಾರತ

ಕಡು ನಡುರಾತ್ರಿಯಲೂ
ಮಾರಣ ಸುಡು ಬಿಸಿಲಿನಲೂ
ಚಳಿಯಾದರು ಲೆಕ್ಕಿಸದೆ
ಮಳೆ ಸುರಿದರು ಹಿಂಜರಿಯದೆ
ಎಲ್ಲವನು ಬದಿಗೊತ್ತಿ ಮುಂದೆ
ಸಾಗಿದವರು ನಮ್ಮ ನಾಡಿನ ವೀರರು

ಹಿಂದೂ ಮುಸಲ್ಮಾನರ ದ್ವೇಷ
ತಂದಿತ್ತ ಅವಾಂತರ
ಸುತ್ತ ಮುತ್ತಲೆಲ್ಲ ನಾಶ
ಮುಂದೇನು ಅನಂತರ

ಕಿಡಿಗೇಡಿಗಳ ಸಿಡಿಮದ್ದಿಗೆ
ಧ್ವಂಸವಾಯಿತೆ ಯಂತ್ರ
ದೇಶರಕ್ಷಣೆಯ ಕರ್ತವ್ಯವು
ಎಂಬುದೆ ಬಾಯಲಿ ಮಂತ್ರ

ಗುಂಡುಗಳ ಚಕಮಕಿಗೆ
ಪ್ರಚಂಡ ವೀರರ ಬಲಿ
ಪ್ರತಿ ಪ್ರಜೆಯೆ ನೀನು
ಇವರಂತೆಯೆ ಕಲಿ

ದೇಶಕ್ಕಾಗಿ ಸಿಪಾಯಿಗಳು
ಮಾಡಿದರು ಕಾಳಗ
ತ್ಯಾಗಿಗಳು ತೊರೆದರು
ತಮ್ಮ ಬಂಧು ಬಳಗ

ಭಾರತಾಂಬೆಯ ಮಕ್ಕಳೆ
ಬನ್ನಿ ನೀವೆಲ್ಲರೂ
ದೇಶ ರಕ್ಷಣೆಗಾಗಿ
ಮುನ್ನುಗ್ಗುವ ನಾವೆಲ್ಲರು

ಜಯ ಜಯ ಭಾರತ ಮಾತಾ
ಎಂಬ ಜಯಕಾರವು
ಮುಸಲರಾಗಲಿ ಎಂದೆಂದಿಗೂ
ನಮ್ಮಿಂದ ಸರ್ವನಾಶವು
ಭಾರತಾಂಬೆಯ ಮಡಿಲಿಗೆ
ನಿರಂತರ ದೊರೆಯಲಿ ಜಯವು

ಚಂಡೀರ ರಮ್ಯ ಪೂಣಚ್ಚ, ಮರಂದೋಡ

## ಪ್ರೀತಿಯ ಮೊಮ್ಮಗಳಿಗೆ ತಾತನ ಹಾರೈಕೆ

ಚಿಕ್ಕ ಮಗು ಲಿಪಿತ ಚಿನ್ನದರಗಿಣಿಯ
ಮಕ್ಕಳೊಳು ಮಾಣಿಕವೇ ಮಾತಿನರಗಿಣಿಯೇ ||

ಹರಳೊಳೆ ಮಾದಾಯ ಹುಳಿಯುಗುರಿಂದ,
ಕೊರಳೊಳು ಸರಪಣಿ ಉಂಗುರುಗಳಿಂದ,
ಗೆಜ್ಜೆಯ ಕಾಲ್ಗಡವು ಗಿಣಿರೆಂಬ ಚೆಂದ ||

ಅಂಬೆಗಾಲಿಡುತ್ತ, ತುಂಬೆಗರೆಯುತ್ತ,
ತುಂಬಿಯನು ಕೆಸರಿನೊಳಗೆ ಸದರಿಸಾರಿಸುತ್ತ,
ಗೊಂಬೆ ಗೊಡವೆಯ ಹಿಡಿದು ನೋಡಿ ನಸುನಗುತ
ಅತ್ತಿತ್ತ ಓಡಾಡಿ ಇತ್ತ ಬಾ..... ಮಗಳೇ ||

ಬಿದಿಗೆ ಚಂದ್ರಮನಂತೆ ದಿನದಿನಕೆ ಬೆಳೆದು,
ಮದಗಜದ ಮರಿಯಂತೆ ಬೀದಿಯಲ್ಲಿ ಸುಳಿದು,
ಚತುರೆ ಲಿಪಿತೆಯು ವೈದ್ಯದೊಳಗೆ ಬೆಳೆದು ||

ಹರುಷದಲಿ ರಾಘವೇಂದ್ರ ಒಲಿದು ರಕ್ಷಿಸಲಿ,
ಪರಪಿತ್ತು ಪರಸಮ್ಮ ಒಲಿದು ರಕ್ಷಿಸಲಿ,
ವೈಕುಂಠಪತಿ ಹರಿನಾರಾಯಣ ಒಲಿದು ರಕ್ಷಿಸಲಿ
ಕಾವೇರಿ ತ್ರಿಮೂರ್ತಿಗಳೇ ಒಲಿದು ರಕ್ಷಿಸಲಿ ||

ದೇವಜನ ದೇವಯ್ಯ, ಬಿಳಿಗೇರಿ

# ಆರೋಗ್ಯ ಚಿಂತನೆ

## ಸುಟ್ಟಗಾಯಗಳು : (Burns)

ದೈನಂದಿನ ಜೀವನದ ಚಟುವಟಿಕೆಗಳಲ್ಲಿ ಯಾವಾಗಾದರೂ ಒಮ್ಮೊಮ್ಮೆ ಜನರು ಸುಟ್ಟಗಾಯಗಳಿಗೆ ತುತ್ತಾಗಬಹುದು. ಜೀವನದಲ್ಲಿ ಆಕಸ್ಮಿಕಗಳು ಸಾಮಾನ್ಯ. ಹಾಗೆಯೇ ಸುಟ್ಟಗಾಯಗಳು ಆಕಸ್ಮಿಕವಾಗಿ ಸಂಭವಿಸಬಹುದು. ಆಕಸ್ಮಿಕವಾಗಿ ಬೆಂಕಿ ಹತ್ತಿಕೊಳ್ಳುವುದು, ಅಡುಗೆ ಮಾಡುವಾಗ ಬಿಸಿ ಎಣ್ಣೆ ಮೈಮೇಲೆ ಬೀಳುವುದು ಇತ್ಯಾದಿ. ಕೆಲವೊಮ್ಮೆ ಉದ್ದೇಶಪೂರ್ವಕವಾಗಿ ಅಥವಾ ಸೇಡು ತೀರಿಸುವುದಕ್ಕೋಸ್ಕರ ಸಹ ಇರಬಹುದು. ಆತ್ಮಹತ್ಯೆಯ, ಕೊಲೆ ಮಾಡುವ ಪ್ರಯತ್ನ ಇರಬಹುದು. ಉದಾ : ವರದಕ್ಷಿಣೆ ವಿಷಯದಲ್ಲಿ ಬೆಂಕಿ ಅನಾಹುತ. ರಾಸಾಯನಿಕ ವಸ್ತುಗಳನ್ನು (ಆಸಿಡ್ ಇತ್ಯಾದಿ) ಎರಚಿ ರೌಡಿಗಳು ಸೇಡನ್ನು ತೀರಿಸಿಕೊಳ್ಳಬಹುದು. ಬೇಜವಾಬ್ದಾರಿಯಿಂದ ವ್ಯಕ್ತಿ ವಿದ್ಯುತ್ ಸ್ಪರ್ಶಕ್ಕೆ ತುತ್ತಾಗಬಹುದು. ಹೀಗೆ ಹತ್ತು ಹಲವು ಬಗೆಯಲ್ಲಿ ಆಕಸ್ಮಿಕಗಳು ಸಂಭವಿಸಬಹುದು.

ಇಂತಹ ಸಂದರ್ಭದಲ್ಲಿ ಏನೇನು ಕ್ರಮಗಳನ್ನು ಕೈಗೊಳ್ಳಬೇಕು? ಪ್ರಥಮ ಚಿಕಿತ್ಸೆ ಏನು? ಈ ವಿಷಯಗಳನ್ನು ಎಲ್ಲರೂ ತಿಳಿದಿರಬೇಕಾದದ್ದು ಅತ್ಯಗತ್ಯ.

**ಪರಿಸ್ಥಿತಿಯನ್ನು ನಿಯಂತ್ರಣಕ್ಕೆ ತನ್ನಿ**

ನಿಮ್ಮ ಮೊತ್ತ ಮೊದಲಿನ ಪ್ರಯತ್ನವೆಂದರೆ ಸುಡುತ್ತಿರುವ ವಸ್ತುವನ್ನು ಆರಿಸುವುದು, ಅದರ ಮೂಲವನ್ನು (Source) ವ್ಯಕ್ತಿಯಿಂದ ಬೇರ್ಪಡಿಸುವುದು. ಆ ಮೂಲಕ ಮತ್ತಷ್ಟು ಹಾನಿಯಾಗುವುದನ್ನು ತಪ್ಪಿಸುವುದು.

ವ್ಯಕ್ತಿಯ ಬಟ್ಟೆಗೆ ಬೆಂಕಿ ತಗುಲಿದ್ದರೆ ದಪ್ಪನೆಯ ಬಟ್ಟೆ, ಗೋಣಿ ಚೀಲ, ಕಂಬಳಿ ಇತ್ಯಾದಿಯಿಂದ ಬೆಂಕಿಯನ್ನು ಒತ್ತಿ ಆರಿಸಬೇಕು. ಬೆಂಕಿ ಉರಿಯುತ್ತಿರುವ ಜಾಗದಿಂದ ವ್ಯಕ್ತಿಯನ್ನು ದೂರಾಗಿಸಬೇಕು.

ವಿದ್ಯುತ್ ಸ್ಪರ್ಶಕ್ಕೆ ಒಳಗಾದ ವ್ಯಕ್ತಿಯನ್ನು ಮುಟ್ಟಿ ಎಳೆಯಬಾರದು (ನಿಮಗೂ ವಿದ್ಯುತ್ ಬಡಿದೀತು) ಮರದ ಕೋಲಿನಿಂದ ವ್ಯಕ್ತಿಯನ್ನು ವಿದ್ಯುತ್‌ನ ಮೂಲದಿಂದ (ವಿದ್ಯುತ್ ತಂತಿ, ಉಪಕರಣ, ಸ್ವಿಚ್ ಇತ್ಯಾದಿ) ಬೇರ್ಪಡಿಸಿ. ಪ್ರಧಾನ ಸ್ವಿಚ್‌ನ್ನು ಆರಿಸಿ (Main) ನೀವು ರಬ್ಬರ್ ಚಪ್ಪಲಿ ಹಾಕಿಕೊಳ್ಳಿ.

ಸುಟ್ಟ ಗಾಯ ಸೌಮ್ಯ ರೂಪದಲ್ಲಿರಬಹುದು. ಇಲ್ಲವೇ ಗಂಭೀರವಾಗಿ ಸುಟ್ಟು ಗಾಯವಾಗಿರಬಹುದು. ದೇಹದ ಎಷ್ಟು ಭಾಗ ಸುಟ್ಟಿದೆ? ಗಾಯ ಎಷ್ಟು ಆಳ ಪ್ರವೇಶಿಸಿದೆ ಎಂಬುವುದರ ಮೇಲೆ ವ್ಯಕ್ತಿಯು ಬದುಕುಳಿಯುವ ಸಾಧ್ಯತೆ ನಿರ್ಧರಿತವಾಗುತ್ತದೆ. ಶರೀರದಿಂದ ಅತಿಯಾಗಿ ದ್ರವಾಂಶ ನಷ್ಟವಾಗುವುದು, ಶಾಕ್, ಸೋಂಕು ಈ ಅಂಶಗಳು ಸಾವಿಗೆ ಪ್ರಮುಖ ಕಾರಣಗಳಾಗಿವೆ.

ಅಲ್ಪಮಟ್ಟದ ಸುಟ್ಟ ಗಾಯದಲ್ಲಿ ಆ ಭಾಗದ ಚರ್ಮ ಕೆಂಪಗಿರಬಹುದಷ್ಟೆ. ಇನ್ನು ಕೆಲವೊಮ್ಮೆ ಆ ಭಾಗದಲ್ಲಿ ಬೊಬ್ಬೆಗಳು ಏಳಬಹುದು. ತೀವ್ರ ಮಟ್ಟದ ಗಾಯದಲ್ಲಿ ಆ ಭಾಗದ ಚರ್ಮ ಸುಟ್ಟು ಕಪ್ಪಾಗಬಹುದು. ಚರ್ಮ ಹರಿದು ಒಳಗಿನ ಮಾಂಸಖಂಡ, ನರ, ಮೂಳೆ ಇತ್ಯಾದಿ ಸಹ ಬೆಂದು ಹೋಗಿರಬಹುದು.

**ಪ್ರಥಮ ಚಿಕಿತ್ಸೆ**

1. ಸಾಧಾರಣ ಮಟ್ಟದ ಸುಟ್ಟಗಾಯಗಳ ಮೇಲೆ ತಣ್ಣನೆಯ ನೀರು ಸುರಿಯಿರಿ. ನಲ್ಲಿಯ ನೀರಿನ ಕೆಳಕ್ಕೆ ಆ ಭಾಗವನ್ನು ಹಿಡಿಯಬಹುದು. ಇದರಿಂದ ಶಾಖ ಒಳ ಪ್ರವೇಶಿಸಿ ಮತ್ತಷ್ಟು ಹಾನಿಯಾಗುವುದು ತಪ್ಪುತ್ತದೆ. ನೀರು ಹಾಕಿದಲ್ಲಿ ಬೊಬ್ಬೆಗಳು ಬರುತ್ತದೆ ಎಂದು ಹೆದರಬೇಕಾಗಿಲ್ಲ. ಆಸಿಡ್ ಇತ್ಯಾದಿ ರಾಸಾಯನಿಕ ವಸ್ತು ಬಿದ್ದಲ್ಲಿ ಸಹ ಆ ಭಾಗವನ್ನು ದೀರ್ಘ ಕಾಲದವರೆಗೆ ನೀರಿನಿಂದ ಚೆನ್ನಾಗಿ ತೊಳೆಯಿರಿ.

ತೀವ್ರ ಸ್ವರೂಪದ ಸುಟ್ಟಗಾಯವಾಗಿದ್ದಲ್ಲಿ, ಗಾಯ ಆಳವಾಗಿದ್ದು ಒಳಗಿನ ಮಾಂಸಖಂಡ ಇತ್ಯಾದಿ ತೋರುತ್ತಿದ್ದಲ್ಲಿ ನೀರು ಹಾಕಬೇಡಿ.

2. ಸುಟ್ಟ ಗಾಯದ ಮೇಲೆ ಎಣ್ಣೆ, ಕಾಫಿ ಪುಡಿ, ಶಾಯಿ, ಸಿಕ್ಕಿದ ಮುಲಾಮುಗಳು ಇತ್ಯಾದಿ ಯಾವುದನ್ನೂ ಹಚ್ಚಬೇಡಿ. ವ್ಯಾಸಲೀನ್ ಇದ್ದಲ್ಲಿ ಅದನ್ನು ಚರ್ಮದ ಮೇಲೆ ಸವರಿ.

3. ಬೊಬ್ಬೆಗಳನ್ನು ಒಡೆಯಲು ಹೋಗಬೇಡಿ.

4. ತೀವ್ರ ಮಟ್ಟದ ಸುಟ್ಟ ಗಾಯವಾಗಿದ್ದಲ್ಲಿ, ಬೊಬ್ಬೆಗಳೆಲ್ಲಾ ಒಡೆದು ಸಾಕಷ್ಟು ದ್ರವ ದೇಹದಿಂದ ನಷ್ಟವಾಗಿದ್ದಲ್ಲಿ ವ್ಯಕ್ತಿಗೆ 'ಶಾಕ್' ಆಗಬಹುದು.

ಸೋಂಕಾಗುವುದನ್ನು ತಪ್ಪಿಸುವುದಕ್ಕೋಸ್ಕರ ಸುಟ್ಟಗಾಯಗಳ ಮೇಲೆ ಸ್ವಚ್ಛವಾದ ಬಟ್ಟೆಯನ್ನು ಮುಚ್ಚಿ.

ವ್ಯಕ್ತಿಯ ದೇಹದ ಉಷ್ಣತೆ ಕಾಪಾಡಲು ದಪ್ಪನೆಯ ಬೆಡ್‌ಶೀಟ್, ಕಂಬಳಿಯಿಂದ ಪೂರ್ಣವಾಗಿ ವ್ಯಕ್ತಿಯ ದೇಹವನ್ನು ಮುಚ್ಚಿ.

ವ್ಯಕ್ತಿಗೆ ಸಾಕಷ್ಟು ದ್ರವಾಂಶ ಕುಡಿಯಲು ಕೊಡಿ (ಹಾಲು, ಹಣ್ಣಿನ ರಸ, ಕಾಫಿ, ಟೀ ಇತ್ಯಾದಿ)

ವ್ಯಕ್ತಿ 'ಶಾಕ್' ಸ್ಥಿತಿಯಲ್ಲಿದ್ದಲ್ಲಿ ಆತನ ಎರಡೂ ಕಾಲುಗಳನ್ನು ಹೃದಯದ ಮಟ್ಟಕ್ಕಿಂತ ಎತ್ತರದಲ್ಲಿಡಿ

5. ವ್ಯಕ್ತಿಯಲ್ಲಿ ಧೈರ್ಯ, ಆತ್ಮವಿಶ್ವಾಸ ತುಂಬಿ, ಆದಷ್ಟು ಬೇಗನೆ ಆಸ್ಪತ್ರೆಗೆ ಒಯ್ಯಿರಿ.

ಡಾ. ಪ್ರವೀಣ ಎನ್. ಎಸ್.
M.B.B.S., M.D. (OBG), D.N.B.
ಕೇರಳ

♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣

ಕೊಡಗು ಸಂಗಾತಿ ಗೌಡರ ಶ್ರೇಯೋಭಿವೃದ್ಧಿಗಾಗಿ ದುಡಿಯುತ್ತಿದೆ ಎಂಬುದಾಗಿ ತಿಳಿದಿರುವ ಜನ ಬರೇ ಬೆರಳೆಣಿಕೆಯಷ್ಟು. ಸಂಘ ಸಂಸ್ಥೆಗಳು ಸೇರಿ ಸಂಗಾತಿಗೆ ಸಹಾಯ ಮಾಡಿದರೆ ಮಾತ್ರ ಸಾಧ್ಯವಾದೀತು ಇಲ್ಲದಿದ್ದರೆ ತುಂಬಾ ಕಷ್ಟವಾಗುತ್ತದೆ.

ಪೂಜಾರಿ ಮೊಣ್ಣಪ್ಪ.

♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣

# ಪರಿಶುದ್ಧ ಗೌಡ ಜನಾಂಗ

ಕೊಡಗಿನ ಗೌಡ ಜನಾಂಗ ಒಂದು ವಿಶಿಷ್ಟ, ಪರಿಶುದ್ಧ ಗೌಡ ಜನಾಂಗ. ಅರೆಭಾಷೆಗೌಡರು, ಗಂಗಡಿಕಾರರು, ಹಾಲಕ್ಕಿ ಗೌಡರು, ಗೌಡ ಸಾರಸ್ವತರು (ಕೊಂಕಣಿ ಬ್ರಾಹ್ಮಣರು) ಎಂದೆಲ್ಲಾ ಹಲವಾರು ಲೇಖನಗಳು ಇದುವರೆಗೆ ಸಂಗಾತಿಯಲ್ಲಿ ಪ್ರಕಟಗೊಂಡವು.

ನಾವು ಅರೆಭಾಷೆ ಗೌಡರು ಎಂದು ನಮ್ಮ ಹಿರಿಯರು ನನಗೆ ತಿಳಿದ ಮಟ್ಟಿಗೆ ಎಲ್ಲೂ ಹೇಳಿಕೊಂಡಿಲ್ಲ. ಮತ್ತು ಪ್ರಚಾರ ಮಾಡಿಲ್ಲ. ನಾವು ಮಾತಾಡುವ ಭಾಷೆ ಅರ್ಧ ಕನ್ನಡ, ಆದ್ದರಿಂದ ಇತರರು ನಮ್ಮನ್ನು ಅರೆಭಾಷೆಗೌಡರು ಎಂದು ಕರೆದರು. ಕೊಡಗರನ್ನು ನಮ್ಮ ಹಿರಿಯರು ಕೊಂಗರೆಂದು (ಕೊಂಗು ದೇಶದ ವಾಸಿಗರು, ವಲಸಿಗರು) ಕರೆದರೆ, ಕೊಡವರು ನಮ್ಮನ್ನು ತುಳುವರೆಂದು ಕರೆಯುತ್ತಾರೆ. ಇದರ ಅರ್ಥ ತುಳು ಬಾಷಿಗರೆಂದಲ್ಲ, ತುಳು ದೇಶದಿಂದ ಬಂದವರೆಂದು.

ಹಿಂದಿನ ಕಾಲದಲ್ಲಿ ನದಿಗಳು, ಪರ್ವತಗಳು ರಾಜ್ಯದ ಸರಹದ್ದುಗಳಾಗಿರುತ್ತಿದ್ದವು. ಹಾಗೆಯೇ ಕಾವೇರಿ ನದಿ ಕೇರಳ ರಾಜ್ಯದ ಗಡಿಯಾಗಿತ್ತು. ಕಾವೇರಿಯಿಂದ ಉತ್ತರಕ್ಕೆ ಇರುವ ಭಾಗಗಳೂ ತುಳು ದೇಶಕ್ಕೆ ಸೇರಿತ್ತು.

ಈಗ ಅರೆ ಕನ್ನಡದ ಹುಟ್ಟು ಹೇಗಾಯಿತೆಂಬುದನ್ನು ನೋಡೋಣ. ನಿಮಗೆಲ್ಲಾ ಗೊತ್ತಿರುವಂತೆ ಹಳೆಕನ್ನಡ, ಮಧ್ಯಕಾಲಿಕ ಕನ್ನಡ ಮತ್ತು ಹೊಸಕನ್ನಡ ಎಂದು ಕನ್ನಡ ಭಾಷೆ ರೂಪಾಂತರ (ಪರಿಷ್ಕರಣ) ಹೊಂದಿತು. ಆದರೆ ಕೊಡಗಿನ ಗೌಡರು ಹಳೆ ಕನ್ನಡವನ್ನೇ (ಮಾತೃಭಾಷೆ) ಆಡುತ್ತಿದ್ದರು. ನಮ್ಮ ಪೂರ್ವಿಕರು ಕ್ಲಿಷ್ಟ ಪದಗಳ ಸ್ಪಷ್ಟ ಉಚ್ಚಾರಣೆ ಮಾಡಲಾರದೆ ಈ ಅರೆ ಕನ್ನಡವನ್ನು ಹುಟ್ಟು ಹಾಕಿದರು. ಉದಾ : ನಮ್ಮ ಅಜ್ಜಿಯು ಮೋಹಿನಿ ಎಂಬ ಹೆಸರಿಗೆ ಮೋಣಿ ಎಂತಲೂ, ಸರಸ್ವತಿ ಎಂಬುದಕ್ಕೆ ಸರಸೊತಿ, ಪಾರ್ವತಿಗೆ ಪಾರೋತಿ, ಪ್ರಭುವಿಗೆ ಪಿರುಬು ಹೀಗೆ ಹಲವಾರು ತಪ್ಪು ಉಚ್ಚಾರಣೆ ಮಾಡುತ್ತಿದ್ದರು. ಹೀಗಿರುವಾಗ ವಿದ್ಯಾಭ್ಯಾಸದ ಗಂಧವೇ ಇಲ್ಲದ ಹಳೆಕಾಲದವರು ಎಷ್ಟು ತಪ್ಪುಗಳನ್ನು ಮಾಡಿರಬಹುದು? ನಾಲಿಗೆ ಹೊರಳದೆ ಕೆಲವು ಪದಗಳು ಉಂಟಾದರೆ, ಇನ್ನು ಕೆಲವು ಪದಗಳು ಮಾತಾಡುವ ರಭಸಕ್ಕೆ ಎಗರಿ ಹೋಗಿ ಉಂಟಾಗಿರಬಹುದು. ನಮ್ಮದು ಹಾಗಿರಲಿ ಕರ್ನಾಟಕದ ಯಾವ ಮೂಲೆಯಲ್ಲಿ ನೋಡಿದರೂ ಶುದ್ಧ ಕನ್ನಡವಿಲ್ಲ. ಬೇಕಾಗಿರುವುದನ್ನು ನುಂಗಿಯೋ ಬೇಡದೇ ಇರುವುದನ್ನು ಸೇರಿಸಿಯೋ ಮಾತನಾಡುತ್ತಾರೆ. "ಬೆಂದ ಕಾಳೂರು" ಹೋಗಿ ಬೆಂಗಳೂರು ಆದ ಹಾಗೆ. ಇನ್ನು ಕೆಲವರು ಅಲಂಕಾರಕ್ಕಾಗಿ ಅನ್ಯಭಾಷೆ ಸೇರಿಸಿ ಮಾತಾಡುತ್ತಾರೆ. ಮತ್ತೆ ಕೆಲವರು ಭಾಷೆ ತಿಳಿಯದೆ (ಗಡಿಪ್ರದೇಶದವರು) ಎರಡು, ಮೂರು ಭಾಷೆ ಸೇರಿಸಿ ಚೌಚೌ (ಪಟ್ಟಣಗಳಲ್ಲಿ) ಭಾಷೆ ಮಾತಾಡುತ್ತಾರೆ. ಒಂದು ಹಳ್ಳಿಯಿಂದ ಇನ್ನೊಂದು ಹಳ್ಳಿಗೆ ಉಚ್ಚಾರಣೆಯಲ್ಲಿ ಬಹಳ ವ್ಯತ್ಯಾಸ ಕಂಡುಬರುತ್ತದೆ. ಉಚ್ಚಾರಣಾ ಧಾಟಿಯಿಂದಲೇ ಈ ಜನರು ಇಂತಹ ಕಡೆಯವರು ಎಂದು ಸುಲಭವಾಗಿ ಹೇಳಬಹುದು. ಹೇಗೇ ಇದ್ದರೂ "ಅರೆಭಾಷೆ" ನಮ್ಮ ಹೆಮ್ಮೆಯ ಭಾಷೆ.

ನನಗೆ ಬುದ್ಧಿ ತಿಳಿದಾಗಿನಿಂದಲೂ ನಮ್ಮ ಹಿರಿಯರು ನಮ್ಮನ್ನು ಮತ್ತು ದ. ಕನ್ನಡದವರನ್ನು ಗೌಡರೆಂದು ವಕ್ಕಲಿಗ (ಒಕ್ಕಲಿಗ) ರನ್ನು ವಕ್ಕಲಿಗ ಗೌಡ ಎಂದು ಹೆಸರಿಸಿ ಕರೆಯುತ್ತಿದ್ದರು. ಅಲ್ಲದೆ ನಮ್ಮ ಹಿರಿಯರು ಒಕ್ಕಲಿಗರೊಂದಿಗೆ ಸಂಬಂಧ ಬೆಳೆಸುವುದನ್ನು ಒಪ್ಪುತ್ತಿರಲಿಲ್ಲ. ಇತ್ತೀಚೆಗೆ ಕೆಲವರು ಶ್ರೀಮಂತರು ಹೆಣ್ಣು ಕೊಡುವ ಪದ್ಧತಿಯನ್ನು ರೂಢಿಸಿಕೊಂಡಿದ್ದಾರೆ. ಕೇವಲ ಬೆರಳೆಣಿಕೆಯಷ್ಟು ಮಂದಿ ಹೆಣ್ಣು ತಂದಿರಬಹುದು. ಆದರೆ ನಮ್ಮವರು ಅವರನ್ನು ಅಸ್ಪೃಶ್ಯರ ಹಾಗೆ ಕಂಡಿದ್ದನ್ನು ನೋಡಿದ್ದೇನೆ. ನಮಗೂ ಅವರಿಗೂ ಹೊಂದಾಣಿಕೆ ಸರಿಯಾಗುವುದಿಲ್ಲ ಎಂಬುದು ಇದರ ಅರ್ಥ. ಇದರ ಮರ್ಮವೇನೆಂಬುದನ್ನು ಯಾರು ವಿಚಾರಿಸದೆ ನಮ್ಮನ್ನು ಗಂಗಡಿಕಾರರ ಗುಂಪಿಗೆ ಸೇರಿಸಿದ್ದು ಸಮಂಜಸವೇ? ಗಂಗರಾಜರ ವಂಶಸ್ಥರೆಂದು ಹೇಳಿಕೊಳ್ಳುವ ಇವರಿಗೂ ಇದರ ಬಗ್ಗೆ ಸ್ಪಷ್ಟವಿಲ್ಲ. ಇತಿಹಾಸದ ಕಾಲ ಗರ್ಭದೊಳಗೆ ಹುದುಗಿ ಹೋಗಿರುವ ಸತ್ಯಾಂಶವನ್ನು ಹೊರಗೆಳೆಯುವುದು ಅಷ್ಟು ಸುಲಭವೆ?

ನಾವು ಇನ್ನೊಂದು ರೀತಿ ಊಹಿಸಬಹುದು. ಗಂಗಡಿಕಾರರೂ ನಾವೂ ಒಂದೇ ಗಂಗರಾಜರ ವಂಶಸ್ಥರಾಗಿದ್ದಲ್ಲಿ, ಗಂಗಡಿಕಾರರೂ ನಮ್ಮಂತೆ ಬರಿ ಗೌಡರಿರಬಹುದು. ಉದಾ: ಹತ್ತು ಕುಟುಂಬ ಹದಿನೆಂಟು ಗೋತ್ರದ ಗುಟ್ಟು (ಹತ್ತು ಕುಟುಂಬದವರಾದ ಗೌಡರು ಎಂಟು ಇತರ ಗೋತ್ರದವರನ್ನು ತಮ್ಮ ಸಹಾಯಕ್ಕಾಗಿ ಇಟ್ಟುಕೊಂಡರು) ಕೊಡಗಿನಲ್ಲಿ ಬಿಟ್ಟು ಇತರೆಡೆಗಳಲ್ಲಿ, ದಾಸ, ಮೇದ, ಬಡಿಗ, ಕುರುಬ, ಕುಂಬಾರ, ಗೊಲ್ಲರು ಮುಂತಾದವರು ಗೌಡ ಎಂಬ ಶಿರೋನಾಮೆಯನ್ನು ತಮ್ಮ ಜಾತಿಯ ಹೆಸರಿನೊಂದಿಗೆ ಸೇರಿಸಿಕೊಳ್ಳುತ್ತಾರೆ. ಆದರೆ ಕೊಡಗು ಮತ್ತು ದ. ಕನ್ನಡದಲ್ಲಿ ಮಾತ್ರ ಒಂದೇ ಅಖಂಡ ಗೌಡ ಜನಾಂಗ ಕಂಡು ಬರುತ್ತದೆ. ಇಲ್ಲಿ ಉಪ ಜಾತಿಗಳಿಲ್ಲ.

(ಮುಂದುವರೆಯುತ್ತದೆ)

ಬಿಟ್ಟೀರ ಚೊಂದಮ್ಮ ಶಂಭು

♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣

## ಬಾಳಿನ ಸಂಗಾತಿ

ಬಾಳಿನ ಸಂಗಾತಿ ನಿನಗೊಂದು ಕವಿತೆ
ಸುಂದರ ಆಕರ್ಷಿತ ಯುವತಿ
ನೋಡಲು ಸಾಕ್ಷಾತ್ ಸರಸ್ವತಿ
ಮುಖದಲ್ಲಿ ಅರಲುವ ಕೋಮಲತೆ
ತುಂಬಾ ಒಳ್ಳೆಯ ನಡತೆ
ಬಹಳ ಬುದ್ಧಿವಂತೆ, ಅಷ್ಟೇ ಮುಗ್ಧತೆ
ಮಿನುಗುವ ಮೈಕಾಂತಿ
ಅವಳ ಕಂಡರೆ ಪ್ರೀತಿ
ಅವಳೆ ನನ್ನ ಕೊಡಗಿನ ಸಂಗಾತಿ

ಪರಿಚನ ಟಿ. ಪ್ರದೀಪ ಮರಗೋ



♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣

# ಕೊಡಗಿನ ಬ್ರಹ್ಮಗಿರಿಯ ಮಡಿಲಲ್ಲಿ ಅಕ್ಟೋಬರ್ 18 ರಂದು ಜಗನ್ಮಾತೆ ಆದಿ ಶ್ರೀ ಕಾವೇರಿಯ ತೀರ್ಥೋದ್ಭವ



ಕೊಡಗಿನ ಬ್ರಹ್ಮಗಿರಿಯ ಮಡಿಲಲ್ಲಿ ಅಕ್ಟೋಬರ್ 18ರ ಸೋಮವಾರದಂದು ಜಗನ್ಮಾತೆ ಆದಿ ಶ್ರೀ ಕಾವೇರಿಯ ತೀರ್ಥೋದ್ಭವ.

ಕೊಡಗಿನ ಬ್ರಹ್ಮಗಿರಿಯ ತಲ ಕಾವೇರಿಯ ಮಡಿಲಲ್ಲಿ ಅಕ್ಟೋಬರ್ 18ರ ಬೆಳಗಿನ 6-32ಗಂಟೆಗೆ ಸರಿಯಾಗಿ ತುಲಾ ಲಗ್ನದಲ್ಲಿ ಪವಿತ್ರಮಾತೆಯು, ದೇಶೋದ್ಧಾರಕಳು, ಕವೇರಮುನಿ ದಂಪತಿಗಳ ದತ್ತು ಪುತ್ರಿಯೂ ಆದ ಲೋಪಮುದ್ರೆ, ಜಗನ್ಮಾತೆ ಶ್ರೀ ಕಾವೇರಿ ತಾಯಿಯು, ದಕ್ಷಿಣಾಚಲದಿಂದ ವರ್ಷಪ್ರತಿ ಸುಮಾರು ಎರಡು ಲಕ್ಷಕ್ಕೂ ಮಿಕ್ಕಿ ಸ್ತ್ರೀ ಪುರುಷ, ಮಕ್ಕಳಾದಿಯಾಗಿ ಆಗಮಿಸುವ ಭಕ್ತವೃಂದಕ್ಕೆ ತೀರ್ಥ ಸ್ವರೂಪಿಣಿಯಾಗಿ ಕಾಣಿಸಿಕೊಳ್ಳಲಿದ್ದಾಳೆ.

ತುಲಾ ಸಂಕ್ರಮಣದಂದು ಕಾವೇರಿ ತಾಯಿಯು ದಕ್ಷಿಣಾಂಚಲದ ಕಾವೇರಿ ಬಯಲಿನ ಕೋಟಿ ಭಕ್ತವೃಂದವನ್ನು ಆಹ್ವಾನಿಸಿ, ತಾನು ಪೂಜಿಸಲ್ಪಡುವುದು ವಾಡಿಕೆ. ಕೊಡಗಿನ ಜನತೆ ಅದರಲ್ಲೂ ಹೆಚ್ಚಿನ ಸಂಖ್ಯೆಯಲ್ಲಿ ಶ್ರೀ ಕಾವೇರಿ ಸನ್ನಿಧಿಯಲ್ಲಿ ವಾಸವಾಗಿ ನೆಲೆ ನಿಂತಿರುವ ಪ್ರತಿಯೋರ್ವರು ಮಡಿ ಭಕ್ತಿಯಲ್ಲಿ ತಾಯಿಯನ್ನು ಪೂಜಿಸ್ಗೈಯ್ಯುವುದರಿಂದ ತಮ್ಮ ಇಷ್ಟಾರ್ಥ ಸಿದ್ಧಿಸುವುದರಲ್ಲಿ ಯಾವುದೇ ಅನುಮಾನವಿಲ್ಲವೆನ್ನುವುದು ಸಹ ಪುರಾಣ ಪ್ರಸಿದ್ಧವಾಗಿದೆ. ಹಾಗೆಯೇ ಜೀವನದಲ್ಲಿ ಒಮ್ಮೆ ನವ ದಂಪತಿಗಳಾಗಿ ಭೇಟಿಕೊಟ್ಟು, ತಾಯಿಯ ಕೃಪೆಗೆ ಪಾತ್ರರಾಗುವುದು ಸಹ ಅಮೂಲ್ಯವಾಗಿದೆ.

**ಕಾವೇರಿಯ ಕಿರುಪರಿಚಯ :**

ಕಾವೇರಿಯ ಉಗಮ ಸ್ಥಾನದ ಕುಂಡಿಕೆಯಲ್ಲಿ ಸೂರ್ಯದೇವನು ತುಲಾ ರಾಶಿಗೆ ಪ್ರವೇಶಿಸುವ ಪುಣ್ಯ ಕಾಲದಲ್ಲಿ ಕಾವೇರಿ ಮತ್ತು ಗಂಗೆಯರ ಸಮಾಗಮವೇ ಈ ತೀರ್ಥೋದ್ಭವ ದಿನ. ಈ ತೀರ್ಥೋದ್ಭವ ದಿನ ಸೂರ್ಯನು ತುಲಾರಾಶಿಯನ್ನು ಪ್ರವೇಶಿಸುವ ಸಮಯದಲ್ಲಿ, ಕುಂಡಿಕಾ ತೀರ್ಥಸ್ನಾನವನ್ನು ವಿದ್ಯುಕ್ತವಾಗಿ ಮಾಡುವುದರಿಂದ ಅಶ್ವಮೇಧದ ಫಲವೂ, ಸರ್ವಪಾಪಪುಂಜ ಪರಿಹರಿಸುವಿಕೆಯೂ, ಮನುಜ ಕುಲವು ಗಂಗಾ ಯಮುನಾ ಸಂಗಮದಲ್ಲಿ ಹೊಂದುವ ಫಲಕ್ಕಿಂತ ಕೋಟಿ ಪಾಲು ಸಿಗುವುದೆಂದು ಮತ್ತು ಪಾಪಮುಕ್ತರನ್ನಾಗಿಯೂ, ಮೋಕ್ಷಕ್ಕೆಡೆ ಮಾಡಿಕೊಡುವುದೆಂದು, ಸರ್ವಸನ್ಮಂಗಳವನ್ನುಂಟು ಮಾಡುತ್ತಾಳೆಂಬ ಗಾಢ ನಂಬಿಕೆ ಸರ್ವ ಶ್ರೇಷ್ಠವಾಗಿರುತ್ತದೆ.

ವಿಷ್ಣುವಿನಿಂದ ಅವತರಿಸಿ, ಲಕ್ಷ್ಮೀದೇವಿಯ ಅಂಶದಿಂದ ಹುಟ್ಟಿದವಳಾಗಿ, ಸೃಷ್ಟಿಕರ್ತ ಚತುರ್ಮುಖ ಬ್ರಹ್ಮನ ದತ್ತು ಪುತ್ರಿಯಾಗಿ ತ್ರಿಲೋಕಸುಂದರಿಯೂ ಆದವಳು, ತನ್ನ ಅಪ್ರತಿಮ ಸೌಂದರ್ಯಕ್ಕೆ ತನಗೆ ತಾನೇ ಅಸೂಯೆಪಟ್ಟುಕೊಳ್ಳುತ್ತಾ, ಕಿಶೋರಿ ಲೋಪಾಮುದ್ರೆಯು ಬೆಳೆಯುತ್ತಾಳೆ. ಇಂದಿಗೂ ಕಾವೇರಿ ಮೂರ್ತಿ ಬಹಳ ಕಮ್ಮಿಯೇ ಸರಿ. ಅವಳ ಚೆಲುವ ಭವ್ಯ ಮೂರ್ತಿ ಇಂದು ಎಲ್ಲೂ ಇಲ್ಲವಾಗಿದೆ. ಸುಂದರಿ ಕಾವೇರಿಯಂತೆಯೇ ಕೊಡಗಿನ ವನಿತೆಯರು ಸಹ ಚಲುವೆಯರಾಗಿರುವುದೊಂದು ವಿಶೇಷವಾಗಿದೆ.

ಬ್ರಹ್ಮಾಂಡ ಬ್ರಹ್ಮಗಿರಿ ತಪ್ಪಲಿನಲ್ಲಿ ಕವೇರ ಮುನಿ ದಂಪತಿಗಳು ಸಂತಾನ ಭಾಗ್ಯಕ್ಕಾಗಿ ಕಠೋರ ತಪಸ್ಸನ್ನು ಆಚರಿಸುತ್ತಿರಲು, ಇವರ ಪರಮ ಭಕ್ತಿಗೆ ಮೆಚ್ಚಿದ ಪರಬ್ರಹ್ಮನು ತನ್ನ ದತ್ತು ಪುತ್ರಿಯಾದ ಲೋಪಾಮುದ್ರೆಯನ್ನು ಲೋಕ ಕಲ್ಯಾಣಕಾರಿಣಿಯಾಗೆಂದು ಹರಸಿ ಅನುಗ್ರಹಿಸುತ್ತಾರೆ. ಅಂದಿನಿಂದ ಕವೇರ ಮುನಿಯ ಮಗಳಾಗಿ 'ಕಾವೇರಿ' ಯಾಗುತ್ತಾಳೆ. ದಿನಗಳು ಉರುಳುತ್ತಾ ಇರಲು ಸುಂದರ ಮಗಳ ಲಾಲನೆ, ಪಾಲನೆಯಲ್ಲಿರಲು, ಈ ಮುನಿ ದಂಪತಿಗಳು ದೇಹ ತ್ಯಾಗಮಾಡಿ ಮುಕ್ತಿಯನ್ನು ಹೊಂದುತ್ತಾರೆ.

ಅಂತೆಯೇ ಅನಾಥೆಯಾದ ಕಾವೇರಿ, ಋಷಿಮುನಿಗಳ ಸೇವೆಯನ್ನು ಮಾಡುತ್ತಾ ಆಶ್ರಮವಾಸಿಯಾಗುತ್ತಾಳೆ. ಲೋಕ ಸಂಚಾರಾರ್ಥವಾಗಿ ಆಗಮಿಸಿದ ಅಗಸ್ತ್ಯ ಋಷಿಗಳ ಇಚ್ಛೆಗೆ ಒಲಿದು ಜೀವನ ಪರ್ಯಂತ ತನ್ನನ್ನು ಒಂದು ಕ್ಷಣವೂ ಬಿಟ್ಟಿರದೆ ತನ್ನೊಡನೆಯೇ ಬಾಳಬೇಕೆನ್ನುವ ವಚನವನ್ನು ಪಡೆದು ಮಹಾತಪಸ್ವಿಗಳ ಸಹಧರ್ಮಿಣಿಯಾಗುತ್ತಾಳೆ ಕಾವೇರಿ.

ಹೀಗಿರಲು ಒಮ್ಮೆ, ಅಗಸ್ತ್ಯರು ತನ್ನ ಪತ್ನಿ ಕಾವೇರಿಯನ್ನು ಜಲ ರೂಪವಾಗಿ ಪರಿವರ್ತಿಸಿ, ಅದನ್ನು ತನ್ನ ಕಮಂಡಲದಲ್ಲಿರಿಸಿ, ಪಕ್ಕದ ಕನ್ನಿಕೆಯ ಬಳಿ ಸ್ನಾನಕ್ಕೆಂದು ತೆರಳುತ್ತಾರೆ. ತನ್ನ ಪತಿಯ ವಚನಭಂಗಕ್ಕೆ ಅಸಂತುಷ್ಟಳಾದ ಪರಮಸುಂದರಿ ಕಾವೇರಿ ತನ್ನ ಪಿತೃವಿನ ಇಚ್ಛೆಯಂತೆ ಜೀವಕೋಟಿಯ ಉದ್ಧಾರಕ್ಕಾಗಿ, ಶಾಶ್ವತ ಜಲರೂಪವನ್ನು ತಳೆದು, ನದಿಯಾಗಿ ಹರಿದು, ತನ್ನ ಸಂಗಾತಿಯರಾದ, ಕನ್ನಿಕೆ ಮತ್ತು ಸುಜ್ಯೋತಿಯವರೊಡಗೂಡಿ ಮೇಘ ಪರ್ವತದಿಂದ ಇಳಿದು, ಹಸಿರಿನ ಚಲುವೆಯಾಗಿ, ಪವನ ಶಕ್ತಿಯ ಅಮೋಘ ಧಾರೆಯಾಗಿ, ತನ್ನ ಪ್ರತಿಯೊಂದು ಕ್ಷಣದ ಬಿಂದುವನ್ನು ಕೋಟಿ ಕೋಟಿ ಜೀವರಾಶಿಗಳ ಪಾಲಿಗೆ ಚೈತನ್ಯಮಯವಾಗಿರಿಸುತ್ತಾ, ಸದಾ ಸದ್ಭಾವನೆ ಪರೋಪಕಾರಿಣಿಯಾಗಿ, ಅಂದಿನಿಂದ ಈ ಧರೆಯೊಳಗೆ ನಿರಂತರವಾಗಿ ಹರಿಯತೊಡಗಿದಳು, ಪರಮಪಾವನೆಯು ಲೋಕೋದ್ಧಾರಕಳೂ ಆದ ಮಾತೆ ಶ್ರೀ ಕಾವೇರಿ.

ಕಾವೇರಿ ಮೊದಲು ಬ್ರಹ್ಮಗಿರಿಯ ಕುಂಡಿಕೆ, ತಲಕಾವೇರಿ, ನಾಗತೀರ್ಥ ಕ್ಷೇತ್ರ, ಭಗಂಡ ಕ್ಷೇತ್ರ, ಭಾಗಮಂಡಲದ ತ್ರಿವೇಣಿ ಸಂಗಮ, ಹರಿಶ್ಚಂದ್ರ, ಬಲಮುರಿ, ಗುಹ್ಯ, ರಾಮಸ್ವಾಮಿ ಕಣಿವೆ, ರಾಮನಾಥಪುರ, ಸಾಲಿಗ್ರಾಮ, ಚುಂಚನಕಟ್ಟೆ, ಕಪ್ಪಡಿ ಕ್ಷೇತ್ರ, ಎಡತೊರೆ, ಎರಡನೇ ಬಲಮುರಿ, ಶ್ರೀನಿವಾಸಕ್ಷೇತ್ರ, ರಂಗನತಿಟ್ಟು, ಪಶ್ಚಿಮವಾಹಿನಿ, ಶ್ರೀರಂಗಪಟ್ಟಣ, ಕರಿಘಟ್ಟ, ಮಹದೇವಪುರ,

7ನೇ ಪುಟಕ್ಕೆ

# ಕುಂಞಣ್ಣ, ಗೂಡೆನ ನೋಡಿಕೆ ಹೋದ್.....

ನಮ್ಮ ಕುಂಞಣ್ಣನ ನೋಡ್ರೆ, ಊರಿಗೆ ಊರೇ ಸಲಾಂ ಹೊಡ್ವದೆ. ಮಾರುದ್ದ ದೂರಲಿ ನಮ್ಮ ಕುಂಞಣ್ಣ ಬಾರ್‌ತಿದ್ರೆ, ನಮ್ಮೂರ್‍ನ ಕಡ್ಡೆಪಿಳ್ಳೆಗ ಓಡಿಹೋಗಿ, ಕುಂಞಣ್ಣನ ಕೈ ಹಿಡ್ಕಂಡು, ಇಸ್ಕೂಲ್ಲ್ ಪದ್ಯ ಹಾಡಿ, ಚಾಕ್ಲೇಟ್ ತಿಂದು ಖುಷಿ ಪಟ್ಟವೆ, ಕೂಸುಗ ಮರ್ಡುದರ ನಿಲ್ಸಿ, ಅವರ್ದೇ ಭಾಷೆಲಿ ಮಾತಾಡ್ತೆ. ಮತ್ತೆ ಆಚೆಮನೆ ತಾತ, ಈಚೆಮನೆ ಅವ್ವಗ, ಕುಂಞಣ್ಣನ ನೋಡ್ರೆ, ಬೆನ್ನ್ ತಟ್ಟಿ 'ಹೆಂಗೊಳ ಕುಂಞಣ್ಣಾ, ಸೌಖ್ಯನಾತ ಮಾತಾಡ್ಸುವೆ. ಇನ್ನು ಹದ್ನೆಂಟು ಇಪ್ಪತ್ತು ವರ್ಷದ ಗೂಡೆಗ, ಕೇಳೋಕಾ ಕುಂಞಣ್ಣಂಗೆ ಮಾತ್ರ ಅರ್ಥ ಆಗಂಗೆ, ಲೈನು ಹೊಡ್ವವೆ. ಕಾರಣ ಹಂಗಿತ್ತು ಕುಂಞಣ್ಣನ ಪರ್ಸನಾಲಿಟಿ. ಐದೂವರೆ ಫೂಟು ಎತ್ತರ, ನೋಡಿಕೆ ಪೊರ್ಲಿತ್. ಸಾಲದ್ದಕ್ಕೆ, ಆ ಊರುಲಿ ಅವನೊಬ್ಬನೇ ಗ್ಯಾಜ್ಯುಯೇಟ್ ಗಡ. ಮದುವೆ ಆತ್ಲೆ. ಮನೇಲಿ ಉಬಂಕ್ಕೆ ತಿಂಬಕ್ಕೆ ತೊಂದರೆ ಇಲ್ಲೆ ಕೂತ್ ತಿಂದರೂ ಮುಗಿಯದಷ್ಟ್ ಸಂಪತ್ತುಟ್ಟು ತಿಳಿದವು ಹೇಳುವಂಗೆ, ಕುಂಞಣ್ಣಂಗೆ ಗತ್ತಿಲ್ಲೆ. ಎಲ್ಲವ್ರಕೂ ಮರ್ಯಾದೆ ಕೊಟ್ಟದೆ. ಕುಂಞಣ್ಣನ ಇಷ್ಟು ಮ್ಯಾಲೆ ಕೂರ್ಸಿಕೆ ಇನ್ನೇನ್ ಬೇಕು ಹೇಳಿ.

ನಮ್ಮ ಕುಂಞಣ್ಣಂಗೆ ಊರು ಸುತ್ತಿಕೆ, ಹೇಳಿ ಮಾಡ್ಸಿದ ಫ್ರೆಂಡು ಚೋಮುಣಿತ. ಇಬ್ರೊರ ಕೆಲ್ಸ ಗೂಡೆ ನೋಡಿಕೆ ಹೋದು. ಮುಂದೆ, ಇಬ್ರೊರು ಕ್ಲಾಸ್‌ಮೇಟ್ ಆಗಿದ್ದೊ ಗಡ, ಈಗ ಗ್ಲಾಸ್‌ಮೇಟುಗ. ಕುಂಞಣ್ಣಂಗೆ ಅರ್ಜೆಂಟಾಗಿ ಒಂದು ಮದ್ವೆ ಆಕುಗಡ. ಹಂಗೇ, ಅದ್ರ ನೆಪ ಹಾಕಿ ಅವು ಹೋಗದ ಮನೆ ಇಲ್ಲೆ ನೋಡದ ಗೂಡೆ ಇಲ್ಲೆ. ಮೊನ್ನೆ ಹಂಗೇ, ಇಬ್ರೊರೂ ಗೂಡೆ ನೋಡಿಕೇತ, ಮೂರ್ನಾಡ್‌ಲಿ ಒಂದು ಮನೆಗೆ ಹೋಗಿದ್ದೊ. ಹೇಳ್ದಂಗೆ ನಮ್ಮ ಕುಂಞಣ್ಣಂಗೆ ಧೈರ್ಯ ಸ್ವಲ್ಪ ಕಮ್ಮಿ. ಗೂಡೆನ ಮನೆಗೆ ಹೋಕಾಕನ ಸ್ವಲ್ಪ ಸ್ಪಿರಿಟ್ ಬರ್ಲಿತ, ಇಬ್ರೊರೂ ಒಂದೊಂದು ಗ್ಲಾಸ್ ಏರ್ಸಿ ಹೊರ್ಟಿದ್ದೊ. ಕುಂಞಣ್ಣನ ಮನೆಂದ ಗೂಡೆನ ಮನೆಗೆ ಆರು ಮೈಲಿ ಆದು. ಈ ಸಂಬಂಧಕ್ಕೆ ಚೋಮುಣಿನೇ ಬ್ರೋಕರ್ ಗಡ. ಕುಂಞಣ್ಣಂಗೆ ದೂರಂದನೇ, ಗೂಡೆನ ಮನೆ ತೋರ್ಸಿತ್. ಗೂಡೆನ ಕಡೆ ಅಷ್ಟೊಂದು ಇದ್ದವಲ್ಲ. ಒಂದು ಸಾಧಾರಣ ಹಂಚುನ ಮನೆ. ಕುಂಞಣ್ಣಂಗೆ ಆಗನೇ ಅದ್ ಮಹಡಿ ಮನೆನಂಗೆ ಕಾಂಬಕೆ ಸುರಾತ್. ಆಂ? ಅರ್ಥ ಆತ್ನಾ? ಅದೇ, ಆ ಗೂಡೆನ ಮನೆ ಕುಂಞಣ್ಣನ ಕಣ್ಣಿಗೆ ಡಬ್ಬಲ್ ಆಗಿ ಕಂಡತ್. ಭಾರೀ ಖುಷಿಯಾಗಿ ಕುಂಞಣ್ಣ ಹೇಳ್ತ್, 'ಚೋಮು, ನಂಗೆ ಈ ಮನೆ ಗೂಡೆನೆ ಆದುತ' ಚೋಮುಣಿ ಮಾತಾಡ್ತೆ. ಇಬ್ರೊರೂ ಮನೆ ಹತ್ತಿದೊ. ಗೂಡೆನ ಅವ್ವಪ್ಪಂಗೆ, ಕುಂಞಣ್ಣನ ನೋಡಿ, "ಸ್ವರ್ಗಕ್ಕೆ ಇನ್ನು ಮೂರೇ ಮೆಟ್ಲ್" ಅಂತಾಗಿತ್. ಕುಂಞಣ್ಣನ ನೋಡಿಕೆನೋ ಏನೋ, ಆ ಮನೆ ಗೂಡೆ ಪ್ರೀತಿಂದ ಸಾಂಕಿದ ಕರೀಕೊತ್ತಿ, ಕಯ್ಯಾಲೆಗೆ ಓಡಿ ಬಾತ್. ಅಷ್ಟೊತ್ತಿಗೆ ಗೂಡೆನ ಅವ್ವ, 'ಇಂತಾ ಪೊರ್ಲುನ ಅಳಿಯ ಇದುವರೆಗೆ ಈ ಮನೆಗೆ ಬಾತ್ಲೆ ನೀನೊಂದು ಅಪಶಕುನಾ....' ಅಂತ [illegible] ತ್ತಿನ ಕಾಲಲಿ ಒದ್ದು, ಅತ್ತ ಹಾಕಿತ್. ಇಬ್ಬರ ಒಳಗೆ ಕರ್ದ್, ಭಾರೀ ಉಪಚಾರ ಮಾಡ್ದೊ. ಹೊಸ ಅಳಿಯಂಗೆ ಕೋಳಿ ಫ್ರೈ ಬೇರೆ, ಮಟನ್ ಸಾರು ಬೇರೆ ಎಲ್ಲ ಗದ್ದಲ ಆತ್. ತುಂಡು ತಿಂಬಕೆ ಗುಂಡು ಇಲ್ಲದ್ರೆ ಹೆಂಗೆ? ಹೊಸ ಅಳಿಯನ ಇಷ್ಟದ ಬ್ರ್ಯಾಂಡ್ ಯಾವ್ದತ ಕೇಳ್ಸಿ, ಅದನ್ನ ತರ್ಸಿ ಕುಡ್ಸಿ ಆತ್. ಈಗ ಕುಂಞಣ್ಣಂಗೆ ಪುನಃ ಡಬ್ಬಲ್ ಡಬ್ಬಲ್ ಕಾಂಬಕೆ ಸುರಾತ್. ಎಲ್ಲ ಊಟ ಉಪಚಾರ ಆದಮ್ಯಾಲೆ ಚೋಮುಣಿ ಕುಂಞಣ್ಣಂಗೆ ಚಿವುಟಿ ಕೇಳ್ತ್, "ಕುಂಞ, ಉಂಡೆಲ್ಲ ಆತ್, ಗೂಡೆ ನೋಡ್ತಿಲ್ಲೆಂತ ಕುಂಞಣ್ಣಂಗೂ ಇಲ್ಲಿಗೆ ಬಂದಾಗಿಂದ, ಗೂಡೆನ ನೋಡುಕುತ ಆಸೆ ಇತ್ತ್. ಆದ್ರೆ, ಹೇಳಿಕೆ ಪುರುಸೊತ್ತಾತ್ಲೆ ಗೂಡೆನ ತೋರ್ಸಿಕೆ, ಅವ್ವಪ್ಪ ಒಪ್ಪಿದೊ. ಕುಂಞಣ್ಣ ಮೆಲ್ಲೆ ಗೂಡೆನ ನೋಡಿ, ಹೆದ್ರಿ ಹೋತ್. ಮತ್ತೆ, ಹಕ್ಕಲಿ ಕುದ್ದಿದ್ದ ಚೋಮುಣಿಗೆ ಚಿವುಟಿ ಹೇಳ್ತ್, "ಚೋಮು, ಗೂಡೆಗೆ ನಾಕು ಕಣ್ಣುಟ್ಟು, ಡಬ್ಬಲ್ ಮೂಕುಟ್ಟು, ಈ ಸಂಬಂಧ ಬ್ಯಾಡ, ನಾವ್ ಇಲ್ಲಿಂದ ಜಾಗ ಖಾಲಿ ಮಾಡಣಾತ. ಚೋಮುಣಿ ಮಾತಾಡ್ತೆ. 'ಇನ್ನು ನಾಕು ದಿನಲಿ ತಿಳ್ಸುವೆ' ಅಂತ ಅಲ್ಲಿಂದ ಕಾಲು ಕಿತ್ತವು, ಮತ್ತೆ ಅತ್ತ ಕಡೆ ಮುಖ ಹಾಕಿ ಮಲಗಿತ್ಲೆ.

ಕಳ್ದವಾರ, ಇನ್ನೊಂದು ಸಂಬಂಧ ನೋಡಿಕೆ ಮತ್ತೊಂದ್ ಮನೆಗೆ ಹೋಗಿದ್ದೊ ಈ ಇಬ್ರೊರು ಗ್ಲಾಸ್‌ಮೇಟುಗ. ಅವು ಕನ್ನಡ ಜಿಲ್ಲೆಯವು ಗಡ. ಹೆಚ್ಚಾಗಿ ಕನ್ನಡಲೇ ಮಾತಾಡ್ದು ಕುಂಞಣ್ಣ ಅಂದು ಭಾರೀ ಪೊರ್ಲುಲಿ ಟೈ ಎಲ್ಲ ಕಟ್ಟಿ, ಮಿಲ್ಟ್ರಿಂದ ತಂದ ಶೂನೆಲ್ಲ ಹಾಕಿ, ಭಾರೀ ಟ್ರಿಮ್ಮಾಗಿ, ಚೋಮುಣಿನೊಟ್ಟಿಗೆ ಗೂಡೆ ನೋಡಿಕೆ ಹೊರಟತ್. ಗೂಡೆನ ಮನೆ ಪ್ಯಾಟೆಲಿ ಒಂದು ಮೂಲೆಲಿ ಆದೆ. ಗೂಡೆನ ಮನೆಗೆ ಹೋಕೆ ಸ್ವಲ್ಪ ಸ್ಪಿರಿಟ್ ಬರ್ಲಿತ ಇಬ್ರೊರೂ ಒಂದು ಬಾರ್‌ಗೆ ನುಗ್ಗಿದೊ. ಈ ಸಾರಿ ಚೋಮುಣಿನೇ ಕೊಡ್ಸಿತು. ನಮ್ಮ ಕುಂಞಣ್ಣ ಬಿಟ್ಟಿ ಸಿಕ್ಕರೆ, ಒಂದು ಗ್ಲಾಸ್ ಜಾಸ್ತಿ ಏರ್ಸಿದೆ. ಇಂದೂ ಹಂಗೇ ಆತ್. ಸ್ವಲ್ಪ ದೂರ ನಡ್ದಾಕಕನ ಚೋಮುಣಿ ಹೇಳ್ತ್, 'ಕುಂಞ, ಇಲ್ಲಿ ನಂದೊಂದು ಫ್ರೆಂಡ್ ಮನೆ ಉಟ್ಟು, ಅವ್ರ ಮಾತಾಡ್ಸಿ ಪೋಯಿತ. ಭಾರೀ ಅಪರೂಪಲಿ ಬಂದ ನೆಂಟ್ರುನ ಭಾರೀ ಖುಷಿ ಮಾಡ್ಕೊಂಡೊ. ಹಂಗೇ ಸ್ವಲ್ಪ ಭಟ್ಟಿ ಸಾರಾಯಿ ಕುಡ್ಸಿದೋ. ಇಬ್ರೊರೂ ಬೇಕಾದಂಗೆ ಕುಡ್ಕೊಂಡೊ. ಹಂಗೂ ಹಿಂಗೂ, ರೋಡುನ ಉದ್ದಗಲ ಅಳ್ತೆ ಮಾಡ್ತ, ಗೂಡೆನ ಮನೆ ತಲುಪಿದೊ. ಗೂಡೆನ ಅಪ್ಪ ದನ ಕಟ್ಟಿ ಹಾಕಿಕೆ, ಬಾಣೆಗೆ ಹೋಗಿದ್ದೊ. ಗೂಡೆನ ಅವ್ವ ಸಗಣಿ ಬಾಚಿಕಂಡ್ ಹಟ್ಟಿಲಿತ್. ಗೂಡೆನ ಸಣ್ಣ ತಮ್ಮ ಬಂದ ನೆಂಟ್ರುನ ನೋಡಿ ಬಾಣೆಗೆ ಓಡ್ತ್. ಅಲ್ಲಿಂದನೇ, 'ಅಪ್ಪಾ, ಹೊಸ ನೆಂಟ್ರುನ ಬಂದೊಳೋ, ಬ್ಯಾಗ ಬಾಪ್ಪ' ಅಂತ ಗಡಿಬಿಡಿ ಮಾಡ್ತ್. ಗೂಡೆನ ಅವ್ವಪ್ಪ ಇಬ್ರೊರೂ ಬಂದ್, ಬಂದ ನೆಂಟ್ರುಗಳ್ಳ ಭಾರೀ ಉಪಚಾರ ಮಾಡ್ದೊ. ಗೂಡೆನ ಕಡೆ ಸ್ವಲ್ಪ ಇದ್ದೋವು. ಒಂದೇ ಗೂಡೆ. ಗೂಡೆನ ಅಪ್ಪ ಹೊಸ ಅಳಿಯ ಆಗವ್ನ ಪೊರ್ಲು ನೋಡಿ ಗ್ಯಾನ ಮಾಡ್ತ್, 'ಇಂತಾ ಅಳಿಯಂಗೆ ಎಷ್ಟು ಕೊಟ್ರುನೂ ಅದು ಕಮ್ಮಿನೇ ಆದೇತೇಳಿ ಲೆಕ್ಕಾ ಹಾಕಿ, ಹೇಳ್ತ್, "ನಮ್ಗೆ ತಾಕತ್ತಿದ್ದಷ್ಟು ಕೊಟ್ಟವೆ. ಇಪ್ಪತ್ತು ಪೌನ್ ಚಿನ್ನ, ಇನ್ನು ಅದ್ರ ಮೇಲೆ ಮೂವತ್ತು ಸಾವಿರ ಕೊಟ್ಟವೆ. ಇನ್ನು ಮದ್ವೆಲಿ ಅಕ್ಕಿ, ಮಾಂಸ ಖರ್ಚು ನಮ್ಮದ್, ಇದ್ರ ಮ್ಯಾಲೆ ನಮ್ಗೆ ಖರ್ಚು ಮಾಡಿಕೆ ಸಾಧ್ಯ ಇಲ್ಲೆ, ಸುಧಾರ್ಸಿಕೊಣೋಕು' ಅಂತ ಹೇಳ್ತ್. ಗೂಡೆನ ಅಪ್ಪ ಪುನಃ ವರದಕ್ಷಿಣೆ ಬಗ್ಗೆನೇ ಮಾತಾಡ್ತೆ ಸುರು ಮಾಡ್ತ್. ಕುಂಞಣ್ಣ ಮಾತ್ರ ಯಾವುದಕ್ಕೂ ಮಾತಾಡ್ತೆ. ಸ್ವಲ್ಪ ಹೊತ್ತು ಬುಟ್ಟು ಹೇಳ್ತ್, 'ನಂಗೆ ಕಾರ್‌ಬೇಕು ಮಾಂವ' ಗೂಡೆನ

7ನೇ ಪುಟಕ್ಕೆ



5ನೇ ಪುಟದಿಂದ

ಸೋಮನಾಥಪುರ, ತಿರುಮಕೂಡಲು ನರಸೀಪುರ, ಮುಡಕತೊರೆ, ತಲಕಾಡು, ಸತ್ಯಗಾಲ, ಗವಿರಾಯನಬೆಟ್ಟ, ಶಿವನಸಮುದ್ರ, ಸಂಗಮ, ಮೇಕೆದಾಟು, ಹೊಗೆನಕಲ್ ಕರ್ನಾಟಕದಲ್ಲಿಯೂ ಮತ್ತು ಮೆಟ್ಟೂರು, ಭವಾನಿ, ಈರೋಡು, ಕ್ಯಾಂಗ್ಯನ್ ಪಾಳ್ಯಮ್, ಉಂಜಲೂರು, ಕೊಡುಮುಡಿ, ನಿರೂರು, ತಿರುಮಕೂಡಲು, ಕಟ್ಟಳೈ, ರಾಮಸಮುದ್ರಮ್, ಸತ್ಯಮ್, ತಿರುನಾರಾಯಣಪುರಮ್, ತಿರುಈಂಗೋಮಲೈ, ಕರುಪತ್ತೂರು, ಕುಳಿತಲೈ, ತಿರುಪ್ಪರ್ಯಾತುರೈ ಮುಕ್ಕೊಂ, ಶ್ರೀರಂಗಂ, ತಿರುವಾನೈಕ್ಕವಲ್, ತಿರುಚಿನಪಳ್ಳಿ, ಕೃಷ್ಣರಾಯಪುರಂ, ಕಲ್ಲಣೆ, ತಿರುವೈಯಾರ್, ತಂಜಾವೂರ್, ಪಾಪನಾಶನಮ್, ಸ್ವಾಮಿಮಲೈ, ಗೋವಿಂದಪುರ, ಧರ್ಮಾಪುರಮ್, ಛಾಯಾವನಮ್, ಪೂಂಪುಹಾರ್, ಹೀಗೆ ತಮಿಳುನಾಡಿನಲ್ಲಿಯೂ ಹರಿದು ಈ ಎಲ್ಲಾ ಕ್ಷೇತ್ರಗಳನ್ನು ಪಾವನವನ್ನಾಗಿಸಿ, ಕೋಟ್ಯಾಂತರ ಭಕ್ತವೃಂದದವರನ್ನು ತನ್ನ ಮಡಿಲಲ್ಲಿ ಪಡೆದು, ಅಲ್ಲಲ್ಲಿ ತನ್ನ ಹರಿವಿನ ಗಾತ್ರ ಪಾತ್ರವನ್ನು ವಿಸ್ತರಿಸಿಕೊಳ್ಳುತ್ತಾ, ಸಂಕುಚಿತಗೊಳ್ಳುತ್ತಾ, ಸುಮಾರು 770 ಕಿ. ಮೀ.ಗಳನ್ನು ಕ್ರಮಿಸಿ, ಕಟ್ಟಕಡೆಗೆ ತಾನು ಜನಿಸಿದ ಗಾತ್ರದಷ್ಟೇ ಬಂಗಾಳ ಕೊಲ್ಲಿಯಲ್ಲಿ ಲೀನವಾಗುವಳು ಪೂಜ್ಯ ಮಾತೆ ಶ್ರೀ ಕಾವೇರಿ.

– ಪಟ್ಟಡ ಪ್ರಭಾಕರ್

6ನೇ ಪುಟದಿಂದ

ಅಪ್ಪಂಗೆ ಸಿಟ್ಟು ನೆತ್ತಿಗೇರ್‌ತ್, 'ಇಷ್ಟೆಲ್ಲ ಕೊಟ್ಟವೇತ ಒಪ್ಪಚಾರ ಆಗುಟ್ಟು, ಅದ್ರ ಮ್ಯಾಲೆ ನಿಂಗೆ ಕಾರ್!?? ಅಂತ ರೇಗಾಡ್‌ತ್. ಇವರಿಬ್ರ ಮಾತುನ ಕೇಳ್ಸಿಕೊಂಡ ಗೂಡೆ, ಅವ್ವಂಗೆ ಹೇಳ್‌ತ್, "ಅವ್ವ, ನಂಗೆ ಇವೇ ಆದು, ಮದುವೆ ಆದಮ್ಯಾಲೆ ಕಾರ್ ಕೊಟ್ಟವೇತ ಅಪ್ಪಂಗೆ ಹೇಳಿಕೆ ಹೇಳ್ವ್ವಾ.....ತ ಚಿವುಟಿಕೆ ಸುರು ಮಾಡ್‌ತ್. ಗೂಡೆನ ಅಪ್ಪ ಮಗಳು ಹೇಳ್ದಂಗೆ ಕುಣಿಯುಂವ. ಎಷ್ಟು ಕಷ್ಟ ಆದ್ರೂ, ಮಗುಳು ಹೇಳಿದನ್ನ ಕೊಡ್ತಿದ. ಅದನ್ನೆಲ್ಲ ಮಾತಾಡಿ, ಹೊರಗೆ ಚಾವಡಿಗೆ ಬಂದ್, 'ನನ್ನ ಮಗಳು ಹೇಳ್ತೆ, ಮದ್ವೆಯಾದ ಮ್ಯಾಲೆ ಕಾರು ಕೊಡ್ಸಣಾತ... ಅದ್ರ ಮುಂದೆ ನಾ....." ಹೇಳ್ತಾ ಇರ್ಕಾಕನನೇ, ಕುಂಞಣ್ಣ 'ಬೊಸಲ್' ಅಂತ ಮಾವನ ಮ್ಯಾಲೆ ಕಾರ್‌ತ್. ಗೂಡೆನ ಅಪ್ಪಂಗೆ ಎಲ್ಲಿಲ್ಲದ ಸಿಟ್ಟು ಬಾತ್. ಕುಂಞಣ್ಣಂಗೂ, ಚೋಮುಣಿಗೂ ಬಾಯ್ಗೆ ಬಂದಂಗೆ ಬೈದ್, ಓಡ್ಸಿಕೆ ನೋಡ್‌ತ್. ಇವ್ಕೆ ಕಣ್ಣು ಕತ್ತಲೆ ಆದಂಗಾಗಿ ಎಲ್ಲಿ ಓಡೊಕುತ ಗೊತ್ತಾತ್ಲೆ. ಹಂಗೂ ಹಿಂಗೂ ಇಬ್ರೂರೂ ಮನೆಂದ ಹೊರಗೆ ಬಿದ್ರೊ. ಮತ್ತೆ, ಅವೆಲ್ಲ ಹೋದ ಮ್ಯಾಲೆ ಗೂಡೆ ಬೇಜಾರ್ ಮಾಡಿಕೊಣ್ತೆತ್, 'ಅವು ಕಾರ್‌ಬೇಕು' ಹೇಳ್ವಾಕನ ಒಂದು ಬೋಗುಣಿ ಕೊಟ್ಟಿದ್ದರೆ.......?

ಕು. ಕಟ್ರತನ ಝಾನ್ಸಿ ದೇವಯ್ಯ, ಬಿ.ಎ.,
ಮೂಡಿಗೆರೆ, ಚಿಕ್ಕಮಗಳೂರು

## ಪ್ರೆಷರ್ ಕುಕರ್‌ನಲ್ಲಿ ಪದಾರ್ಥಗಳು ಬೇಗನೆ ಬೇಯುವುದು ಹೇಗೆ ?

ಪ್ರೆಷರ್ ಕುಕರ್ ಅಡಿಗೆ ಮನೆಯ ಆಧುನಿಕ ಸಾಧನ. ಅದರಲ್ಲಿ ಯಾವುದೆ ಪದಾರ್ಥವಾಗಲೀ ಬಹಳ ಬೇಗನೆ ಬೇಯುತ್ತದೆ. ಇಂಧನವು ಸಹ ಉಳಿತಾಯವಾಗುತ್ತದೆ. ಆಹಾರದ ಪೌಷ್ಠಿಕಾಂಶಗಳು ಹಾಳಾಗುವುದಿಲ್ಲ. ಪ್ರೆಷರ್ ಕುಕರ್‌ನಲ್ಲಿ ಪದಾರ್ಥಗಳು ಬೇಗನೆ ಬೇಯುವುದು ಹೇಗೆ ನಿಮಗೆ ಗೊತ್ತೇ ?

ಯಾವುದೇ ದ್ರವವಾಗಲಿ ಒಂದು ನಿರ್ದಿಷ್ಟ ಉಷ್ಣಾಂಶಕ್ಕೆ ಬಂದಾಗ, ಕುದಿಯುತ್ತದೆ. ಇದಕ್ಕೆ ದ್ರವದ 'ಕುದಿ ಬಿಂದು' ಎಂದು ಹೆಸರು. ನೀರು 100 ಸೆ. ಉಷ್ಣಾಂಶದಲ್ಲಿ ಕುದಿಯುತ್ತದೆ. ವಾತಾವರಣದಲ್ಲಿ ಒತ್ತಡ ಹೆಚ್ಚಿದಂತೆ, ದ್ರವದ 'ಕುದಿಬಿಂದು' ಸಹ ಹೆಚ್ಚುತ್ತದೆ ಎಂದು ವೈಜ್ಞಾನಿಕ ಪ್ರಯೋಗಗಳಿಂದ ತಿಳಿದುಬಂದಿದೆ. ಒತ್ತಡ ಕಡಿಮೆ ಇದ್ದರೆ, ದ್ರವದ 'ಕುದಿಬಿಂದು' ಸಹ ಕಡಿಮೆಯಾಗುತ್ತದೆ. ನಾವು ಪರ್ವತದ ಮೇಲೇರುತ್ತಿದ್ದಂತೆ, ಒತ್ತಡ ಕಡಿಮೆಯಾಗುತ್ತದೆ. ಆದ್ದರಿಂದ ಅಂತಹ ಪ್ರದೇಶದಲ್ಲಿ ನೀರು 100 ಸೆ. ಗಿಂತ ಕಡಿಮೆ ಉಷ್ಣಾಂಶದಲ್ಲಿ ಕುದಿಯುತ್ತದೆ. ಈ ಕಾರಣದಿಂದ, ಪರ್ವತ ಪ್ರದೇಶದಲ್ಲಿ ಬೇಳೆಕಾಳುಗಳು, ಅಕ್ಕಿ - ಮುಂತಾದವು ಬೇಯಲು ಹೆಚ್ಚು ಕಾಲ ಬೇಕಾಗುತ್ತದೆ.

ಪ್ರೆಷರ್ ಕುಕರ್, ಸ್ಟೈಯಿನ್‌ಲೆಸ್ ಸ್ಟೀಲ್ ಅಥವಾ ಅಲ್ಯೂಮಿನಿಯಂ ಮಿಶ್ರ ಲೋಹದಿಂದ ತಯಾರಿಸಿದ ಒಂದು ಪಾತ್ರೆ. ಅದಕ್ಕೊಂದು ಮುಚ್ಚಳವಿರುತ್ತದೆ. ಈ ಮುಚ್ಚಳದ ಮೇಲೆ ಒಂದು ಸೇಫ್ಟಿ ವಾಲ್ವ್ ಇರುತ್ತದೆ. ಪಾತ್ರೆಯೊಳಗಿನ ಒತ್ತಡ, ಅದು ತಡೆದುಕೊಳ್ಳಬಹುದಾದ ಮಟ್ಟವನ್ನು ಮೀರದಂತೆ ನೋಡಿಕೊಳ್ಳುವುದೇ ಸೇಫ್ಟಿ ವಾಲ್ವ್‌ನ ಕೆಲಸ. ಪಾತ್ರೆ ಮತ್ತು ಮುಚ್ಚಳ ಸೇರುವ ಜಾಗದಲ್ಲಿ ಒಂದು ರಬ್ಬರ್ ರಿಂಗ್ ಇರುತ್ತದೆ. ಇದು, ನೀರಾವಿ ಹೊರಗೆ ಹೋಗದಂತೆ ನೋಡಿ ಕೊಳ್ಳುತ್ತದೆ. ಪ್ರೆಷರ್ ಕುಕರ್‌ಗೆ, ಬಿಸಿ ತಟ್ಟದಂತಹ ಒಂದು ಹಿಡಿ ಇರುತ್ತದೆ, ಇದರ ನೆರವಿನಿಂದ ನಾವು ಪ್ರೆಷರ್ ಕುಕರ್ ಅನ್ನು ಹಿಡಿದುಕೊಳ್ಳಬಹುದು. ಪ್ರೆಷರ್ ಕುಕರ್‌ನೊಳಗೆ ಸ್ವಲ್ಪ ನೀರು ಹಾಕಬೇಕು. ಅನಂತರ ಬೇಯಿಸಬೇಕಾದ ಪದಾರ್ಥವನ್ನು ಅದರೊಳಗಿನ ಒಂದು ಪಾತ್ರೆಯಲ್ಲಿ ಹಾಕಬೇಕು. ಅನಂತರ ಮುಚ್ಚಳವನ್ನು ಭದ್ರವಾಗಿ ಕೂಡಿಸಬೇಕು. ಪಾತ್ರೆ ಬಿಸಿಯಾಗುತ್ತಿದ್ದಂತೆ ನೀರಿನ ಹಬೆ ಪಾತ್ರೆಯೊಳಗಿನ ಒತ್ತಡವನ್ನು ಹೆಚ್ಚಿಸುತ್ತದೆ. ಒತ್ತಡ ಹೆಚ್ಚಾದಂತೆ ನೀರಿನ ಕುದಿಬಿಂದು ಸಹ ಹೆಚ್ಚುತ್ತದೆ. ಆಗ ಅದರ ಕುದಿಬಿಂದು 100 ಸೆ. ಬದಲಾಗಿ 130 ಸೆ ಗೆ ಏರುತ್ತದೆ. ಆದ್ದರಿಂದ, ಪ್ರೆಷರ್ ಕುಕರ್‌ನೊಳಗೆ ಆಹಾರಪದಾರ್ಥ ಬಲು ಬೇಗನೆ ಬೇಯುತ್ತದೆ. ಕುಕರ್‌ನೊಳಗಿನ ಒತ್ತಡ, ಅಗತ್ಯವಿರುವಷ್ಟು ಒತ್ತಡಕ್ಕಿಂತ ಜಾಸ್ತಿಯಾದಾಗ, ಕಂಟ್ರೋಲ್ ವಾಲ್ವ್ ತಾನಾಗಿಯೇ ಮೇಲೆತ್ತುಕೊಳ್ಳುತ್ತದೆ ಮತ್ತು ಹೆಚ್ಚಿಗೆ ಹಬೆ ಹೊರ ಹೋಗಲು ಅವಕಾಶ ಮಾಡಿಕೊಡುತ್ತದೆ. ಹೀಗೆ ಒಳಗಿನ ಒತ್ತಡ ನಿಯಂತ್ರಿತವಾಗುತ್ತದೆ. ಪ್ರೆಷರ್ ಕುಕರ್ ಒಡೆದು ಹೋಗುವ ಅಪಾಯ ಇರುವುದಿಲ್ಲ.

## ಬೆಂಗಳೂರಿನ ಹೊರವಲಯದಲ್ಲಿ ವರ್ಣರಂಜಿತ ನಾಡು ಕಾವೇರಿನಾಡಿನ ಸಂಸ್ಥಾಪಕ ಅಮ್ಮಾಜೀರ ಪೊನ್ನಪ್ಪ ದಂಪತಿಗಳ ನಾಲ್ಕನೆ ವೈಯುಕ್ತಿಕ ಜನ ಸಂಘಟನೆ ಮನಸ್ಸಿಗೆ ಮುದ ನೀಡಿದ ಕೈಲ್ ಪೋಳ್ದ್ ಹಬ್ಬ – ಸಂಘಟನೆ ಜಯಪ್ರದ

ಇತ್ತ ಸಮಾಜವು ಜಡಭರತವಾಗಿ ಕಳಾಹೀನವಾಗಿದ್ದ ಸಮಯದಲ್ಲಿ ಅತ್ತ ಬೆಂಗಳೂರಿನ ಮೂಲೆಯೊಂದರಲ್ಲಿ ಸಂಘಟನೆಗಾಗಿ ತನ್ನದೇ ಆದ ಕನಸಿನ ಸಾಮ್ರಾಜ್ಯದಲ್ಲಿ ಲೀನವಾಗಿದ್ದ ಅಂದಿನ ಅವರ ಕನಸು ಇಂದು ಕೈಗೂಡುತ್ತಿರುವುದು ನಿಜಕ್ಕೂ ಬೆಂಗಳೂರಿನಲ್ಲಿ ಕಾವೇರಿನಾಡಿನ ಜನ್ಮದಾತ ಶ್ರೀ ಅಮ್ಮಾಜೀರ ಪೊನ್ನಪ್ಪನವರ ಏಕ ವ್ಯಕ್ತಿಯ ಸಾಧನೆಯನ್ನು ಸಮಾಜವು ಜನಸಾಗರವು ಇಂದು ನಿಬ್ಬೆರಗಿನಿಂದ ನೋಡುವಂತಾಗಿದೆ. ಸ್ವತಃ ಮಾತುಗಾರನು, ಕಲಾಭಿಮಾನಿಯೂ ಸಂಘಟನೆಯ ಚತುರನು, ಚೇತೋಹಾರಿಯು ಆದ ಶ್ರೀ ಪೊನ್ನಪ್ಪನವರು ಬಡತನದಿಂದ ಮೇಲೆರಿ ತನ್ನ ಕನಸನ್ನು ತಾನೇ ನನಸು ಮಾಡಲು ಹೊರಟ ಜನಾಂಗದ ಧೀಮಂತ ದಿಗ್ಗಜರಲ್ಲಿ ಒಬ್ಬರಾಗಿದ್ದಾರೆ.

ದಿನಾಂಕ 12-9-1999ರ ಭಾನುವಾರ ಅರೆಭಾಷೆ ಗೌಡರಿಗೆ ಬೆಂಗಳೂರಿನ ಹೊರವಲಯದ ಕಾಡುಕರೇನ ಹಳ್ಳಿಯ ಕಾವೇರಿನಾಡು ಕೈಲ್‌ಪೋಳ್ದ್ ಹಬ್ಬ ಆಚರಿಸಲು ಸಜ್ಜಾಗಿತ್ತು. ಇಡೀ ಜನಾಂಗಕ್ಕೆ ಸಂಗಾತಿ ಪತ್ರಿಕೆಯಲ್ಲಿ ಆಮಂತ್ರಣ ನೀಡಿ ಬೆಳಿಗ್ಗೆ 9 ಗಂಟೆಗೆ ಸರ್ವ ನೆಂಟರನ್ನು ಸ್ವಾಗತಿಸಲು ಕಾವೇರಿನಾಡು ಸಂಭ್ರಮದಿಂದ ಎದುರು ನೋಡುತ್ತಿತ್ತು. ರಾಷ್ಟ್ರೀಯ ಹೆದ್ದಾರಿಯಿಂದ ಕೇವಲ ಒಂದು ಕಿ. ಮೀ. ಅನತಿ ದೂರದಲ್ಲಿರುವ ಕಾವೇರಿ ನಾಡಿನಲ್ಲಿ ಹಾಕಿದ್ದ ಚಪ್ಪರವು ಸಭಾಮಂಟಪವು ಮತ್ತು ಕೊಡಗಿನ ವಾದ್ಯ ಕುಣಿತವು ಕಾತರದಿಂದ ಸಂತೋಷದಿಂದ ಬರಮಾಡಿಕೊಳ್ಳುತ್ತಿತ್ತು. ಎತ್ತ ನೋಡಿದರತ್ತ ಜನಾಂಗದವರು ವೀರ ಯೋಧರ ಉಡುಪು ಕುಪ್ಪಸ ದಟ್ಟಿಯಲ್ಲಿದ್ದರೆ ಯುವ ಗೌಡವತಿಯರು ಹುರುಪಿನಿಂದ ತಮ್ಮದೆ ಆದ ಮುಂದೆ ನೆರಿಗೆಯ ಗೇಂಟಿ ಕಟ್ಟಿದ ಸೀರೆಯಲ್ಲಿದ್ದರು. ಕಾರ್ಯಕ್ರಮ ಆಗುತ್ತಿದ್ದಂತೆ ಹಿರಿಯರು ಕಿರಿಯರು ಕಾರ್ಯಕ್ರಮವನ್ನು ಮೂಕ ಪ್ರೇಕ್ಷಕರಂತೆ ಆಲಿಸುತ್ತಿರುವುದು ಇನ್ನೊಂದು ದೃಶ್ಯವಾಗಿತ್ತು. ಅಂತೂ ಜನಸಾಗರಕ್ಕೆ ಈದಿನ ಖುಷಿಯೋ ಖುಷಿ. ಇದು ನಾಲ್ಕನೇ ವರ್ಷದ ಅಮ್ಮಾಜೀರ ಪೊನ್ನಪ್ಪನವರ ಸಂಭ್ರಮದ ಕೈಲ್‌ಪೋಳ್ದ್ ಹಬ್ಬದ ಪರಿಯಾಗಿತ್ತು.

ಹೊತ್ತಾರೆ 9-35 ನಿಮಿಷಕ್ಕೆ ಕಾವೇರಿನಾಡು ವಿದ್ಯಾಸಂಸ್ಥೆಯ ಆವರಣದಲ್ಲಿ ಸುಮಾರು 3,000ಕ್ಕೂ ಮೇಲ್ಪಟ್ಟು ಗೌಡ ಬಾಂಧವರು ನೆರೆದಿದ್ದರು. ಜ್ಯೋತಿಯನ್ನು ಅಣ್ಣಾಚೀರ ಚೈತ್ರ ಮಾದಪ್ಪ (ನಾಲ್ಕು ತಿಂಗಳು) ಮತ್ತು ಕಲ್ಲುಮುಟ್ಲು ಜೈಶ್ರೀ ಬಸಪ್ಪನವರು (ಏಳು ತಿಂಗಳು) ಚಿಕ್ಕ ಹಸು ಕಂದಮ್ಮನವರ ಹಸಿಕೈಗಳಿಂದ ಜ್ಯೋತಿಯನ್ನು ಬೆಳಗಿಸಿದರು. ಕೊಡಗು ಗೌಡ ಸಾಂಸ್ಕೃತಿಕ ಅಕಾಡೆಮಿಯ ಉಪಾಧ್ಯಕ್ಷರಾದ ಶ್ರೀ ಗುಡ್ಡೆಮನೆ ರಮೇಶ್‌ನವರು ಮತ್ತು ಅಮ್ಮಾಜೀರ ಪೊನ್ನಪ್ಪನವರು ತಮ್ಮ ಅಮೃತ ಹಸ್ತದಿಂದ ಜ್ಯೋತಿಯನ್ನು ಬೆಳಗಿಸಿ ಬೆಳಗಿನ ಕಾರ್ಯಕ್ರಮಕ್ಕೆ ನಾಂದಿ ಹಾಡಿದರು.

ಜ್ಯೋತಿಯ ಬೆಳಗೋಣಾ, ಕಾವೇರಿ ನಾಡನ್ನು ಕಟ್ಟೋಣಾ ಎಂಬ ಉದ್ಘೋಷದ ಗೀತೆಯನ್ನು ಅಮ್ಮಾಜೀರ ಧೃತಿ ಪೊನ್ನಪ್ಪನವರು ನೀಡಿದರು. ಕಾವೇರಿ ಮಾತೆಯ ಶ್ಲೋಕ, ಪ್ರಾರ್ಥನೆಯನ್ನು ಬೋಳ್‌ಗಲ್ ಸವಿತಾ ಸೀತಾರಾಂನವರು ಮಾಡಿದರು. ಕಾರ್ಗಿಲ್ ಯುದ್ಧದಲ್ಲಿ ಮಡಿದ ಯೋಧರಿಗೆ ಮತ್ತು ವಿಶ್ವಶಾಂತಿಯಾಗಿ ಒಂದು ನಿಮಿಷದ ಮೌನಾಚರಣೆ ನಡೆಯಿತು. ಕಾವೇರಿ ಬೆಟ್ಟದ ಮತ್ತು ಕಾವೇರಿನಾಡು ವಿದ್ಯಾಸಂಸ್ಥೆಯ ನೂತನ ನಿರ್ಮಾಣದ ಸಭಾ ವೇದಿಕೆಯ ಉದ್ಘಾಟನೆಯನ್ನು ಮಂಡಲ ಪಂಚಾಯ್ತಿಯ ಅಧ್ಯಕ್ಷರಾದ ಶ್ರೀ ಗಂಗಾ ಹನುಮಯ್ಯನವರು ನೆರವೇರಿಸಿದರು. ಗಣಪತಿ ವಿಗ್ರಹದ ಪ್ರತಿಷ್ಠಾಪನೆಯನ್ನು ಶ್ರೀ ಗುಡ್ಡೆಮನೆ ರಮೇಶ್ ಉದ್ಘಾಟಿಸಿದರು.

ಸಭೆಯ ಅಧ್ಯಕ್ಷತೆಯನ್ನು ಬೆಂಗಳೂರಿನ ಕೊಡಗು ಮತ್ತು ದ. ಕ. ಜಿಲ್ಲಾ ಗೌಡ ಸಮಾಜದ ಅಧ್ಯಕ್ಷರಾದ ಶ್ರೀ ದಂಬೆಕೋಡಿ ಆನಂದನವರು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಮಂಡಲ ಪಂಚಾಯಿತಿಯ ಅಧ್ಯಕ್ಷರಾದ ಶ್ರೀ ಗಂಗಾ ಹನುಮಯ್ಯನವರು ಆಗಮಿಸಿದ್ದರು. ಹಾಗೆ ಸಭಾ ವೇದಿಕೆಯಲ್ಲಿ ಅತಿಥಿಗಳಾಗಿ ಕಾಡುಕರೇನ ಹಳ್ಳಿಯ ಜಮೀನ್ದಾರ ನಂಜಪ್ಪನವರು, ಗೌಡ ಸಾಂಸ್ಕೃತಿಕ ಅಕಾಡೆಮಿಯ ಉಪಾಧ್ಯಕ್ಷರಾದ ಶ್ರೀ ಗುಡ್ಡೆಮನೆ ರಮೇಶ್‌ನವರು, ಶ್ರೀ ನಂಗಾರ್ ನಾಣಯ್ಯ, ಇನ್‌ಕಂಟ್ಯಾಕ್ಸ್ ಕಮಿಷನ್‌ನವರು, ಬೈತಡ್ಕ ಜೋಯಪ್ಪನವರು, ಡಿವೈಎಸ್ಪಿ ಕರ್ನಾಟಕ ಲೋಕಯುಕ್ತ, ಬೆಂಗಳೂರಿನ ದ. ಕ. ಮತ್ತು ಕೊಡಗು ಸಮಾಜದ ಉಪಾಧ್ಯಕ್ಷ ಅನಂತ್‌ರಾಜ್ ಗೌಡರವರು, ಹಾಸನದ ಕೊಡಗು ಮತ್ತು ದ. ಕ. ಜಿಲ್ಲಾ ವಿದ್ಯಾಸಂಘದ ಅಧ್ಯಕ್ಷರಾದ ಶ್ರೀ ಕೈಬೀಲಿರ ಪೊನ್ನಣ್ಣನವರು, ಮಹಿಳಾ ಸಂಘದ ಅಧ್ಯಕ್ಷಿಣಿ ಮುತ್ತಮ್ಮನವರು, ಯುವ ನೇತಾರ ಐಕೊಳದ ಯುವಕ ಸಂಘದ ಅಧ್ಯಕ್ಷರಾಗಿ ಜಿಲ್ಲಾ ಬಹುಮಾನ ಪಡೆದ ಶ್ರೀ ಕೊಂಪುಳಿರ ಗಣೇಶ್ ಬೋಪಯ್ಯನವರು, ಬೆಂಗಳೂರಿನ ರೇವಣ್ಣಸಿದ್ಧಯ್ಯ, ಕಡಂಡ್ಕ ಉತ್ತಯ್ಯನವರು, ಕೊಡಗು ಸಂಗಾತಿ ಪತ್ರಿಕೆಯ ಗೌರವ ಸಂಪಾದಕರಾದ ಶ್ರೀ ಪಟ್ಟಡ ಪ್ರಭಾಕರನವರು ಸಭಾ ವೇದಿಕೆಯಲ್ಲಿ ಉಪಸ್ಥಿತರಿದ್ದರು.

ಕಾರ್ಯಕ್ರಮ ನೀಡಲು ಹಲವಾರು ತಂಡಗಳು, ಕೊಡಗಿನಿಂದಲೂ, ಮೈಸೂರಿನಿಂದಲೂ, ಹಾಸನದಿಂದಲೂ, ಬೆಂಗಳೂರಿನಿಂದಲೂ ಆಗಮಿಸಿ ಭಾಗವಹಿಸಿ ನೆರೆದ ಜನರಿಗೆ ಸಾಂಸ್ಕೃತಿಕ ಮುದವನ್ನು ನೀಡಿದರು. ನೃತ್ಯ, ಇಂಗ್ಲೀಷ್ ಡ್ಯಾನ್ಸ್, ಹಾಡು, ಗ್ರೂಪ್‌ಡ್ಯಾನ್ಸ್, ಅಣುಕು ನೃತ್ಯ, ಏಕ ಪಾತ್ರಾಭಿನಯ, ಶಿವಶಕ್ತಿ ತಾಂಡವ ನೃತ್ಯ ಎಲ್ಲಾ ಕಾರ್ಯಕ್ರಮಗಳು ಒಂದರ ಮೇಲೊಂದರಂತೆ ನೆರೆದಿದ್ದ ಸಭಿಕರನ್ನು ರಂಜಿಸಿದವು.

ಸಭೆಯ ಅಧ್ಯಕ್ಷರಾದ ದಂಬೆಕೋಡಿ ಆನಂದನವರು ಮಾತನಾಡುತ್ತಾ ನಮ್ಮ ಗೌಡ ಸಮಾಜವು ಕಳೆದ ಇಪ್ಪತ್ತೈದು ವರ್ಷಗಳಿಂದ ಮಾಡಲಿಕ್ಕಾಗದ ಕೆಲಸವನ್ನು ಕಳೆದ ನಾಲ್ಕು ವರ್ಷಗಳಿಂದ ಶ್ರೀ ಅಮ್ಮಾಜೀರ ಪೊನ್ನಪ್ಪನವರು ಜನ ಸಂಘಟನೆಯ ಮೂಲಕ ಮಾಡಿ ತೋರ್ಸಿ, ಎಲ್ಲರಿಗೂ ಮಾದರಿಯಾಗಿದ್ದಾರೆ ಎಂದು ಮೆಚ್ಚುಗೆಯನ್ನು ವ್ಯಕ್ತ ಪಡಿಸಿದರು. ನಾವೆಲ್ಲರೂ ಒಂದೇ. ಭಿನ್ನಾಭಿಪ್ರಾಯಗಳು ಸಲ್ಲದು. ಅರೆಭಾಷೆ ಮತ್ತು ನಮ್ಮ ಸಂಸ್ಕೃತಿಗೆ ಒತ್ತು ಕೊಡಬೇಕು. ಮಕ್ಕಳಿಂದಲೇ ಭಾಷೆಯನ್ನು ಕಲಿಸಲು ಪ್ರಯತ್ನಿಸಬೇಕು. ಬೇರೆ ಬೇರೆಯಾಗಿ ಕೈಲ್ ಪೋಳ್ದ್ ಮಾಡುವುದಕ್ಕಿಂತಲೂ ಜೊತೆಯಾಗಿ ಎಲ್ಲರೂ



ಸೇರಿ ಒಂದೇ ಕೈಲ್ ಪೋಳ್ದ್ ಮಾಡಿದರೆ ಉತ್ತಮ ಎನ್ನುವ ಅಭಿಪ್ರಾಯವನ್ನು ವ್ಯಕ್ತ ಪಡಿಸಿದರು. ಒಂದೇ ವೇದಿಕೆಯಲ್ಲಿ ತರುವ ಹುನ್ನಾರವನ್ನು ಬೆಂಗಳೂರಿನಲ್ಲಿ ಗೌಡ ಯುವಕರು ಮಾಡುತ್ತಾ ಇದ್ದಾರೆ ಇವರ ಶ್ರಮಕ್ಕೆ ಪ್ರತಿಫಲ ಸಿಗಲಿ ಎಂದು ಹಾರೈಸಿದರು. ಹಂಚಿ ಹೋದ ಗೌಡರನ್ನು ಕಾವೇರಿನಾಡಿನಲ್ಲಿ ಒಂದುಗೂಡಿಸುವ ಪ್ರಯತ್ನವನ್ನು ಅಮ್ಮಾಜೀರ ಪೊನ್ನಪ್ಪನವರು ಮಾಡಿರುವುದು ನಿಜಕ್ಕೂ ಸಂತೋಷದ ಸಂಗತಿಯೆಂದರು.

ಇನ್ನೊಬ್ಬ ಮುಖ್ಯ ಅತಿಥಿ ಗುಡ್ಡೆಮನೆ ರಮೇಶ್‌ನವರು ಮಾತನಾಡಿ ನಮ್ಮ ಭಾಷೆ, ಸಂಸ್ಕೃತಿಯನ್ನು ಹೆಮ್ಮೆ ಇಟ್ಟು ಅಭಿಮಾನದಿಂದ ಬೆಳೆಸಬೇಕೆಂದರು. ಕಾವೇರಿ ನಾಡಿನ ಈ ಹಬ್ಬವು ಶತಮಾನದ ಕೊನೆ ಕೈಲ್ ಮುಹೂರ್ತ ಹಬ್ಬ ಆಗಿದೆ. ಕಾವೇರಿನಾಡು ಇಂದು ಕಾವು ಏರಿದ ನಾಡ್ ಆಗಿ ಪರಿವರ್ತನೆಗೊಂಡಿದೆ. ಶತಮಾನದ ಪ್ರಾರಂಭದಲ್ಲಿ ಹಿಂದಿದ್ದು ಈಗ ಶತಮಾನದ ಕೊನೆಯಲ್ಲಿ ಮುಂದೆ ಬಂದು ನಾವು ಸಂಸ್ಕೃತಿ ಮತ್ತು ಭಾಷೆಯೊಡನೆ ಇಪ್ಪತ್ತೊಂದನೇ ಶತಮಾನಕ್ಕೆ ರಭಸದಲ್ಲಿ ನುಗ್ಗುತ್ತಿರುವುದು ನಿಜಕ್ಕೂ ಹೆಮ್ಮೆ ಎನಿಸಿದೆಯೆಂದರು. ಬೆಂಗಳೂರಿನ ಕಾಡು ಕರೇನ ಹಳ್ಳಿಯಿಂದ ಜಾಗ ಪಡ್ದ್ ಕಾವೇರಿನಾಡ್ ಅಂತ ಹೇಳಿ ನಿವೇಶನ ಹಂಚಿ ಕುಗ್ರಾಮವನ್ನು ನಾಡಾಗಿ ಪರಿವರ್ತಿಸಿದ್ದಾರೆ ಶ್ರೀಯುತರು. ಇದು ಮುಂದೆ ಕಾಡುಕರೇನ ಹಳ್ಳಿ ಕಾವೇರಿನಾಡ್ ಆಗಿ ಪರಿವರ್ತನೆ ಆಗಲೆಂದು ಕಾವೇರಿ ಸಂಸ್ಕೃತಿಯನ್ನು ಬೆಳೆಸಲಿ ಎಂದು ಹಾರೈಸಿದರು. ವ್ಯಾಪಾರಿ ಮನೋಭಾವನೆ ಇಲ್ಲದೆ ಈ ನಗರವನ್ನು ಬೆಳೆಸಲಿ ಅಲ್ಲಿಗೆ ಎಲ್ಲಾರು ಸಹಕರಿಸುವಂತಾಗಲೆಂಬ ಕಿವಿಮಾತನ್ನು ಸಹ ಈ ಸಂದರ್ಭದಲ್ಲಿ ತಿಳಿಸಿದರು. ಅರೆಭಾಷೆ ಕವಿಗಳಾದ ಹೊದ್ದೇಟಿ ಭವಾನಿಶಂಕರ್, ಕುಲ್ಲಚನ ಕಾರ್ಯಪ್ಪ, ಕೂಡಕಂಡಿ ಪೊನ್ನಪ್ಪನವರ ಸಾಲಿನಲ್ಲಿ ನಿಲ್ಲುವ ಈ ವ್ಯಕ್ತಿಯಾಗಿದ್ದಾರೆ ಎಂದು ಪ್ರಶಂಸಿದರು. ಎಲ್ಲದಕ್ಕೂ ಮುಖ್ಯವಾಗಿ ಬೇಕಾಗಿದ್ದು. ಮಾಧ್ಯಮ. ಅದು ಕೊಡಗು ಸಂಗಾತಿ ಪತ್ರಿಕೆ ಮಾಧ್ಯಮ. ಈ ಪತ್ರಿಕೆಯು ಕೊಡ್‌ಗ್ ಜಿಲ್ಲೆಯಲ್ಲಿರುವ ಜನಾಂಗದ ಏಕೈಕ ಪತ್ರಿಕೆಯಾಗಿದೆ. ಜನರಿಗೆ ಬರವಣಿಗೆ ರಚಿಸಲು ವೇದಿಕೆಯಾಗಿದೆ. ಇದು ತಿಂಗಳಿಗೆ ಎರಡು ಸರ್ತಿ ಮನೆ ಬಾಗಿಲಿಗೆ ಬರ್ತಾ ಇದೆ. ಜನರ ಜೀವನಾಡಿಯಾಗಿ ಇದೆ. ಇದರ ಸದುಪಯೋಗವನ್ನು ಸರ್ವ ಬಾಂಧವರು ಪಡೆದುಕೊಳ್ಳಬೇಕು. ಪ್ರತಿಯೊಬ್ಬರು ಕೊಂಡು ಓದಬೇಕು. ಆಗ ಮಾತ್ರ ನಮ್ಮ ಪ್ರತಿಭೆಗಳು ತಿಳಿದುಕೊಳ್ಳಲು ಸಹಕಾರಿಯಾಗುತ್ತದೆ. ಜಗತ್ತಿನಾದ್ಯಾಂತ ದೇಶಗಳು ಪತ್ರಿಕೆಯಿಂದ ಸಾಕಷ್ಟು ಬದಲಾವಣೆ ಕಂಡಿದೆ. ಹಾಗೆಯೇ ಜನಾಂಗದ ಬದಲಾವಣೆಗೆ ಅಭಿವೃದ್ಧಿಗೆ ಈ ಪತ್ರಿಕೆಯ ಉಪಯೋಗ ಈಗ ಅಪೂರ್ವವಾಗಿದೆಯೆಂದರು.

ಸಂಘಟನೆಯ ಬಗ್ಗೆ ಸಾಕಷ್ಟು ಮಾತನಾಡಿದ ಇವರು ಕೊಡಗಿನ ಚರಿತ್ರೆಯನ್ನು 1965ರಲ್ಲಿ ಬರೆದ ಡಿ. ಎನ್. ಕೃಷ್ಣಯ್ಯನವರ ಕೊಡಗು ಚರಿತ್ರೆಯಲ್ಲಿ ಗೌಡರ ವಿಷಯವಿಲ್ಲ. 1870ರ ಕೂರ್ಗ್ ಗೆಜೆಟಿನಲ್ಲಿ ಗೌಡರ ಪ್ರಸ್ತಾಪವಿಲ್ಲ. ನಮ್ಮ ನಾಯಕರು ಯಾರು ಈ ಬಗ್ಗೆ ತಲೆಕೆಡಿಸಿಕೊಳ್ಳಲಿಲ್ಲ. ಪ್ರತಿಷ್ಠಿತ ಜನಾಂಗದ ತುಳಿತಕ್ಕೆ, ನಿರ್ಲಕ್ಷ್ಯತನಕ್ಕೆ ಒಳಗಾಗಿದೆ. ಪ್ರತಿಭಾವಂತರು ವಂಚಿತರಾಗಿದ್ದಾರೆ. ಮಡಿಕೇರಿ ಕೋಟೆಯಲ್ಲಿರುವ ಸರ್ಕಾರಿ ದಾಖಲೆಗಳಲ್ಲಿ ಗೌಡ ಜನಾಂಗದ ದಾಖಲೆ ಯಾವುದು ಇಲ್ಲ. ಯಾಕೆ ಹೀಗಾಯ್ತು? ಅನ್ನುವ ವಿಚಾರಲಿ ನಾವು ಚಿಂತಿಸಬೇಕೆಂದು ಸಲಹೆ ನೀಡಿದರು. ನಮ್ಮನ್ನು ನಾವೇ ಸತ್ಕರಿಸಿಕೊಳ್ಳಬೇಕು. ನಾವು ಎಲ್ಲೆ ಇದ್ದರು ನಮ್ಮ ಸಂಸ್ಕೃತಿಯನ್ನು ಮರಿಬಾರದು. ಭಾಷೆ ಮತ್ತು ಸಂಸ್ಕೃತಿ ಉಡಿಗೆಯಲ್ಲಿಯೇ ಸಭೆಗಳಿಗೆ ಬರಬೇಕೆಂದು ಅತೀ ಕಳಕಳಿಯಿಂದ ವಿನಂತಿಸಿಕೊಂಡರು.

ಪಂಚಾಯಿತಿ ಅಧ್ಯಕ್ಷರಾದ ಗಂಗಾ ಹನುಮಯ್ಯನವರು ಕಾವೇರಿನಾಡಿನ ಏಳಿಗೆಗಾಗಿ ಶ್ರಮಿಸುವೆಯೆಂದರು. ಕಾವೇರಿ ನಾಡಿನ ಶಾಲೆಯಿಂದ ರಾಷ್ಟ್ರೀಯ ಹೆದ್ದಾರಿಗೆ ¾ ಕಿ. ಮಿ. ದೂರದ ರಸ್ತೆಯನ್ನು ಮಾಡಿಸಿ ಕೊಡುತ್ತೇನೆಂದು ಅದರ ಮಧ್ಯದ ಜಾಗದಲ್ಲಿ ಬರುವ ಜಾಗದವರಿಂದ ಬಿಡ್ಸಿ ಕೊಡುತ್ತೇನೆಂದು ಆಶ್ವಾಸನೆಯನ್ನು ಇತ್ತರು. ಇದೇ ಸಂದರ್ಭದಲ್ಲಿ ಕಾಡುಕರೇನ ಹಳ್ಳಿಯ ಜಮೀನ್ದಾರ ನಂಜಪ್ಪನವರ ಜಮೀನು ತಡೆಯಾಗಿರುವುದರಿಂದ ತಮ್ಮ ಜಮೀನಿನಿಂದ ರಸ್ತೆಗೆ ಬೇಕಾಗುವಷ್ಟು ಸ್ಥಳವನ್ನು ದಾನವಾಗಿ ನೀಡಿ ಇದೇ ಸಂದರ್ಭದಲ್ಲಿ ಘೋಷಿಸಿದರು.

ಜನರ ಸಹಕಾರ ಸಹಾನುಭೂತಿಗಳು ಇವೆಲ್ಲವು ಇರುವುದರಿಂದ ಅಮ್ಮಾಜೀರಯವರ ಕಾವೇರಿ ನಾಡು ಎಲ್ಲಾ ದೃಷ್ಟಿಯಿಂದ ಅಭಿವೃದ್ಧಿ ಹೊಂದುವ ಶುಭಲಕ್ಷಣವನ್ನು ಕಂಡಿದೆ.

ಸಾಂಸ್ಕೃತಿಕ ಕಾರ್ಯಕ್ರಮದ ಉದ್ಘಕ್ಕೂ ಕುಯ್ಯಮುಡಿ ನವೀನ್‌ಕುಮಾರ್ ಮತ್ತು ಸುಳ್ಯಕೋಡಿ ಶೈಲಜಾ ಅಮರ್‌ನಾಥ್, ಮಾಡಾವ್ ವಿಜಯ ಕುಮಾರ್ ಮತ್ತು ನಂಗಾರ್ ಸುನೀತಾ ನಿಂಗರಾಜ್, ಕಾಚಿಲಂಡ ಅಶೋಕ ಮತ್ತು ಮೊಂಟಡ್ಕ ಗೀತನವರ ಉತ್ತಮ ಮಟ್ಟದ ನಿರೂಪಣೆ ಜನರನ್ನು ರಂಜಿಸಿತು.

ಸ್ವಾಗತ ಭಾಷಣವನ್ನು ಅಮ್ಮಾಜೀರ ಪೊನ್ನಪ್ಪನವರು ಮಾಡಿದರು. ಸಭಾವೇದಿಕೆಯ ಸಭೆಯ ನಿರೂಪಣೆಯನ್ನು ಮತ್ತು ಸ್ವಾಗತವನ್ನು ಉಡುದೋಳಿರ ಸೋಮಪ್ಪನವರು ನಡೆಸಿಕೊಟ್ಟರು. ವಂದನಾರ್ಪಣೆಯನ್ನು ಶ್ರೀ ಕಲ್ಲುಮುಟ್ಲು ಬಸಪ್ಪನವರು ವಿಧಿವತ್ತಾಗಿ ನೆರವೇರಿಸುವುದರೊಂದಿಗೆ ಮಧ್ಯಾಹ್ನ 2-30ಕ್ಕೆ ಸಭೆ ಬರ್ಕಸ್ತಾಯಿತು. ಆನಂತರ ಕೊಡಗಿನ ಪದ್ಧತಿಯ ಊಟೋಪಚಾರ ಭರ್ಜರಿಯಾಗಿತ್ತು. ಈ ಮಧ್ಯೆ ತೆಂಗಿನಕಾಯಿಗೆ ಗುಂಡು ಹೊಡೆಯುವುದು, ಹಿರಿಯರು, ಗಂಡಸರು, ಹೆಂಗಸರು ಮಕ್ಕಳಾದಿಯಾಗಿ ಪಾಲ್ಗೊಂಡು ಕೈಲ್‌ಪೋಳ್ದ್‌ಗೆ ಮೆರಗು ನೀಡಿತ್ತು. ಕೊಡಗಿನ ವಾಲಗದ ತಂಡವನ್ನು ಕಾವೇರಿ ನಾಡಿಗೆ ತರಿಸುವ ಉಸ್ತುವಾರಿಯನ್ನು ಮರಗೋಡಿನ ನವಯುವಕರಾದ ಉತ್ಸಾಹಿ ತರುಣ ಶ್ರೀ ಅಪ್ಪೆಯಂಡ್ರ ಮಣಿಯವರು ಮಾಡಿದ್ದರು. ನಗರದ ಇತರ ಎಲ್ಲಾ ಕಡೆಗಳಿಂದ ಆಗಮಿಸಿದ ಆಮಂತ್ರಿತರಿಗಾಗಿ ವಿಶೇಷ ಬಸ್ಸಿನ ಸೌಕರ್ಯವನ್ನು ಕಾವೇರಿನಾಡು ಏರ್ಪಡಿಸಿತ್ತು.

ಸಂಜೆ 4-30ಕ್ಕೆ ಮುಕ್ತಾಯಗೊಂಡ ಕಾರ್ಯಕ್ರಮವನ್ನು ಯಶಸ್ವಿಯಾಗಿ ನಡೆಸಿಕೊಟ್ಟು ಜನಾಂಗದ ಏಕತೆಗೆ, ಏಳಿಗೆ, ಅಭಿವೃದ್ಧಿಗೆ ನಾಡಿನ ಜನರ ಹಿತಕ್ಕಾಗಿ ತನ್ನನ್ನೇ ತಾನೇ ತ್ಯಾಗಿಸಿಕೊಂಡ ಈ ಅಮ್ಮಾಜೀರ ಪೊನ್ನಪ್ಪ, ಲೀಲಾವತಿ ದಂಪತಿಗಳಿಗೆ ಹಾಗೂ ಅವರ ತಂಡಕ್ಕೆ ಜನಾಂಗದ ಪರವಾಗಿ ಕೊಡಗು ಸಂಗಾತಿಯ ನಮನಗಳು.

ಜೈ ಗೌಡರೇ !

ವರದಿ : ಪಟ್ಟಡ ಪ್ರಭಾಕರ



# ಕರಿಚಿನ್ನ -ಧಾರಾವಾಹಿ-32

ಮೂಲಕಥೆ : ಅಶ್ವಥಿ ಅರವಿಂದ್

[ಅರೆಭಾಷೆಗೆ] : ಎಂ. ಇ. ಮುಹಮ್ಮದ್

ಬೋರ್‌ಗುಡ್ಡೆ ದೇವಯ್ಯ ರೌಡಿಗಳಿಗೆ ಹಣ ಕೊಟ್ಟ್ ಹೇಳ್‌ತ್.

"ಹತ್ರ ಸಿಕ್ಕಿರೆ ಆ ಬೊಡ್ಡಿ ಮಂಜನ ಹೊಟ್ಟೆಗೆ ಚಾಕ್ ಹಾಕಿ ಸಾಯ್ಸಿ ಬುಡಿ ನೀವು ಹೆದ್ರೋದೇನೂ ಬೇಡ. ನೀವಿನ್ನ್ ಹೋಗಿ"

ಎರಡ್ ಗಂಟೆ ಕಳ್ದ್ ಆ ಮೂರ್ ರೌಡಿಗ ಸರಿ ಕುಡ್ಕಂಡ್ ಬಂದೊ ಹಗಲಿಡೀ ಬೋರ್‌ಗುಡ್ಡೆ ದೇವಯ್ಯನ ಬಂಗ್ಲೆಗೆ ಕಾವಲ್ ಕುದ್ದೊ.

ಸಾಯಂಕಾಲ ದೇವಯ್ಯ ಎಲ್ಲಿಗೋ ಹೋಕೆ ಹೊರಟತ್ತ್. ಅಂವ ಗೂಂಡಗಳ್ನ ಕರ್‌ದ್ ಹೇಳ್‌ತ್ತ್.

"ನಾನ್ ಆ ಅಡ್ವೊಕೇಟ್‌ದ್ ಮನೆಗೆ ಹೋಗಿ ಬನ್ನೆ. ಇಲ್ಲಿ ಏನಾದ್ರ್ ವಿಷ್ಯ ಇದ್ರೆ ನಂಗೆ ತಿಳ್ಸೊಕು. ಬಹಳ ಎಚ್ಚರ ಇರೊಕುತ. ಅಂವ ಯಾವ ಹೊತ್ತ್‌ಲಿ ಬಂದದೇಂತ ಹೇಳಿಕೆ ಸಾಧ್ಯ ಇಲ್ಲೆ."

"ಅದೆಲ್ಲ ನಾವ್ ನೋಡಿಕಂಡವೆ ಸಾರ್. ಅಂವ ನಮ್ಮ ಕಣ್ಣಿಗೆ ಬಿದ್ದರೆ ಸಾಕ್ ಅಲ್ಲಿಗೆ ಅವನ ಕತೆ ಮುಗ್‌ದಂಗೆ" ತಿಳ್ಕಣಿತ ಸೈಕಲ್ ಉಸ್ಮಾನ್ ಹೇಳ್‌ತ್.

ರಾತ್ರಿ ಎಂಟ್ ಗಂಟೆ ಕಳ್‌ತ್. ಒಳ್ಳ ಕ್ವಾಟ ಗಾಳಿ ಉಟ್ಟ್‌ಲತ ರೌಡಿ ಬಿದ್ದು, ಕರಾಟೆ ಕಾಳನ ಕಡೆಗೆ ನೋಡ್‌ತ್.

"ಒಳ್ಳ ಕ್ವಾಟ ಉಟ್ಟಿಲ್ಲಾ?"

"ಹೌದಲ್ಲ ಒಂದ್ ಪೆಗ್ ಇಳ್ಸಿರೆ ಹೆಂಗೆ?"

"ಈಗ ನಾವು ಕುಡಿಯಕೆ ಹೋದ್ರೆ, ಅದೇ ಹೊತ್ತ್‌ಗೆ ಆ ಬೊಡ್ಡಿ ಮಂಜ ಬಂದರೆ.....?"

"ಅದ್ ಹೌದ್! ಒಂದ್ ಕೆಲ್ಸ ಮಾಡ್ನೊ ಡ್ರೈವರ್ ಮೊಣ್ಣಯ್ಯ ಹೋಗಿ ಎರಡ್ ಬಾಟ್ಲ್ ತರ್ಲಿ"

ಮೊಣ್ಣಯ್ಯ ಹೋತ್ ಮೋನಕಾ ಬಾರ್‌ಗೆ ತಿಂಬಕೆ ಏನಾದ್ರ್ ತಕ ಮಾರಾಯ, ಬೇಸಿದ ಮೊಟ್ಟೆಯೊ, ಮಸಾಲೆ ಒಡೆಯೋ, ಇಲ್ಲದೆ ಹೋದ್ರೆ ಹಂದಿದ್ ಚುಟ್ಟಿ ಇದ್ದರೆ ತಕ.

ಅಂವ ಸಾರಾಯಿ ಅಂಗಡಿಗೆ ನಡ್‌ದ್ ತನಿಗೆ ಬೇಕಷ್ಟ್ ಕುಡ್‌ದ್ ಆದ ಮೇಲೆ ಎರಡ್ ಬಾಟ್ಲ್ ಸಾರಾಯಿ ತಕಂಡ್ ಐವತ್ತು ರೂಪಾಯಿದ್ ವಡೆನೂ ಬೇಸಿದ ಮೊಟ್ಟೆನೂ ಮತ್ತೆ ಚುಟ್ಟಿನ ತಕಂಡ್ತ್. ಹೊರಟತ್ತ್. ಅಲ್ಲಿಂದ ಅಂವ ಬೊರ್‌ಗುಡ್ಡೆ ದೇವಯ್ಯನ ಬಂಗ್ಲೆ ಕಡೆಗೆ ಅರ್ಧದಾರಿಗೆ ತಲಪ್‌ಕ್‌ನ ಅವನ ಪ್ಯಾಂಟ್ ಸೊಲ್ಪ ಜಾರಿದಂಗೆ ಆತ್. ಪ್ಯಾಂಟ್ ಸರಿ ಮಾಡಿಕೇಂತ ಸಾರಾಯಿ ಮತ್ತೆ ತಿಂಡಿನ ಕೆಳಗೆ ಮೊಡ್ಗಿಕೆ ಬಗ್ಗ್‌ಕಾಕನ ಹಿಂದೆಂದ ಪಿಟಾಕಿ ಹೊಡ್ದಂಗೆ ಪಟೇರ್‌ತ ಒಂದ್ ಎಟ್ ಅವನ ತಲೆಗೆ ಬೀತ್.

ತಲೆ ತಿರ್‌ಗಿ ಹೋತ್. ಯಾರೇಂತ ನೋಡಕಾಕನ ಪುನ ಒಂದ್ ಏಟ್ ಬೀತ್. ಒಂದರ ಮೇಲೆ ಒಂದ್ ಏಟ್ ಹೊಡಿತಾ ಇರೋ ವ್ಯಕ್ತಿ ಯಾರೇಂತ ಅವರಿಗೆ ಗೊತ್ತೇ ಆತ್ಲೆ. ಅಷ್ಟಲ್ಲಿ ಕತ್ತಲಲಿ ಬಂದ ಆ ವ್ಯಕ್ತಿ ರಸ್ತೆಗೆ ಉರ್‌ಳಿಸಿ ಹಾಕಿ ಲಾಯ್ಕಾಗಿ ಒದ್ದ್ ಹಾಕಿತ್. ಎರಡ್ ಹಲ್ಲ್ ಉದ್‌ರಿತ್ ಬಾಯ್‌ಲ್ಲಿ ರಕ್ತ ಬಾತ್.

"ದಮ್ಮಯ್ಯ ನಿನ್ನ ಕಾಲ್ ಹಿಡ್‌ದೆನೆ. ನನ್ನ ಕೊಲ್ಬೇಡ"

"ಏಯ್, ರ್‍ಯಾಸ್ಕಲ್ ಇದ್ ನಾನ್ ಮಾರಾಯ ಚಂಗುಮಣಿ"

ಮೊಣ್ಣಯ್ಯ ಸೊಂಟಲಿ ಸಿಕ್ಕಿಸಿದ್ದ ಚಾಕ್‌ನ ಎಳೆದ್ ತೆಗೆದ್ ಅವನ ಎದೆ ಮೇಲೆ ಹತ್ತಿ ಕುದ್ದ್ ಕಂಡತ್. ಚಾಕ್‌ನ ಅವನ ದೊಂಡೆಗೆ ಸರಿಯಾಗಿ ಹಿಡ್‌ತ್.

"ಇನ್ನೀಗ ಸಾಯೋಕಾ ಬೇಡಾಂತ ನೀನ್ ತೀರ್ಮಾನ ಮಾಡ್ರೆ ಸಾಕ್, ನನ್ನ ತಂಗೆನ ಕೊಂದವು ಯಾರ್ ಹೇಳ್? ಎರಡನೇ ಸರ್ತಿ ನಾನ್ ಕೇಳ್‌ದುಲೆ, ಸರಿಯಾಗಿ ಉತ್ತರ ಹೇಳಿಬುಡ್" ಗೊತ್ತಾತ

"ಅಯ್ಯೋ ಕೊಲ್ಬೇಡ ಹೇಳ್‌ನೆ"

"ಹೇಳ್ ಗಿಣಿಯಂಗೆ ಎಲ್ಲ ಹೇಳೊಕು"

ಅಂವ ಪ್ರಾಣ ಹೋದೇಂತ ಹೆದ್ರಿ ನಡ್‌ದ ಎಲ್ಲ ಸಂಗತಿನ ಹೇಳ್‌ತ್.

"ನಿನ್ನ ಸಾಹುಕಾರ ಸೂಳೆ ಮಂಜ ಎಲ್ಲುಟ್ಟು ಅಂವ? ಬೇಗ ಹೇಳ್"

"ಅವು ಅಡ್ವೋಕೇಟ್ ರತೀಶ್ ಸಾರ್‌ನ ಮನೆಗೆ ಹೋಗುಟ್ಟು" ರತೀಶನ ಮನೆ ದಾರಿನೂ ಮೊಣ್ಣಯ್ಯ ಹೇಳಿ ಕೊಟ್ಟತ್.

"ನೀನ್ನ ನಾನ್ ಕೊಲ್ಲದೆ ಹಂಗೆ ಬುಟ್ಟನೆ. ನೀನೊಬ್ಬ ಬಾಡಿಗೆ ಗೂಂಡಾ ಅಲ್ಲ ಮತ್ತೆ? ನಾನ್ ಸಾ ಒಂದ್ ಕಾಲಲಿ ನಿನ್ನಂಗೇ ಇದ್ದಂವ. ಆದ್ರಿಂದ ನಿನ್ನ ಕೊಲ್ಲಿಕೆ ನಂಗೆ ಇಷ್ಟ ಇಲ್ಲೆ. ಆದರೆ ನೀನ್ ಯಾಗೋಳೂ ಗೇನ ಇಟ್ಟ್ ಕೊಳ್ಳುವಂತ ಒಂದ್ ಸಣ್ಣ ಗುರ್ತ್ ಮಾಡಿ ಬುಟ್ಟನೆ. ಅದ್ ಮಾಡದೆ ನಿನ್ನ ಹಂಗೆ ಬುಡಿಕೆ ನನ್ನಿಂದ ಸಾಧ್ಯ ಇಲ್ಲೆ ಆತಾ?"

ಚಂಗುಮಣಿ ಮೊಣ್ಣಯ್ಯನ ಮುಖ ಎರಡೂ ದವಡೆಗಳಿಗೆ ಎರಡ್ ಪ್ರಸ್ ಪಾಯಿಂಟ್‌ನ ಚಾಕು ಬಿಡ್ಸಿತ್. ರಕ್ತ ಹರ್‌ತ್. ಕಡೆಗೆ ಬೆನ್ನಿಗೆ ನಾಕ್ ಒತ್ತ ಕೊಟ್ಟತ್.

ಮೊಣ್ಣಯ್ಯ ಸೋಯೆ ತಪ್ಪಿ ಬಿದ್ದ್ ಹೋತ್.

**ಇಲ್ಲಿಗೆ ಮುಟ್ಟ........**

ಪೋಸ್ಟ್ ಮಾರ್ಟಂ ಮಾಡ್‌ದ ಶವನ ಮನೆಗೆ ಕಳಿಸುವೆ. ಅಣ್ಣ ಬಂದ್ ಕೇಳ್‌ಕನ ಏನ್ ಹೇಳ್ಲಿ ಮಗಳೆ ಅಂಥ ಸೋಮಯ್ಯ ಹೇಳಿಕಂಡ್ ಮರ್‍ಬದೆ. ಮಾರಣೆ ದಿನದ ಪೇಪರಲಿ ನೀಲುನ ಪೋಟೋ ಮತ್ತೆ ರಂಜನ್‌ದ್ ಮರ್ಡರ್ ಕೇಸ್‌ಲಿ ಒಂದನೆ ಸಾಕ್ಷಿ ನೀಲು. ಚಂಗುಮಣಿನ ತಂಗೆತ ಇದ್ದದೆ. ದೇವಯ್ಯ ಪೇಪರ್ ಕಟ್ಟಿಂಗ್‌ನ ಚಂಗುಮಣಿಗೆ ತಕ್ಕೊಂಡೊಗಿ ಕೊಟ್ಟದೆ. ಊದಿಕಂಡ್ ನೋಡಿಕೆ ಬೊತ್ತದ ನೀಲುನ ಪೋಟೋ ನೋಡಿ ಹೆದ್ರಿ ಕುಸ್ಸಿದ್ ಕುದ್ದತ್. ಅಲ್ಲಿಂದ ಅಂವ ಹುಚ್ಚನಂಗೆ, ಕೊಂದ್ ಬುಡ್ತ್ ನನ್ನ ತಂಗೆನ ಬೋರ್‌ಗುಡ್ಡೆ ದೇವಯ್ಯ ಕೊಂದ್ ಬುಡ್ತ್. ನಾನ್ ಬದ್ಕಿ ಇದ್ರೆ ಅವನ ಜೀವ ತೆಗೆಯದೆ ಇರ್‌ಕಿಲೆ. ಸರ್ಕಲ್ ಇನ್ಸ್‌ಪೆಕ್ಟರ್, ಚಂಗುಮಣಿ ಲಾಕಪ್‌ದ ತಪ್ಪಿಸಿಕಂಡದ್ನ ದೇವಯ್ಯಂಗೆ ತಿಳಿಸಿದೆ. ದೇವಯ್ಯಂಗೆ ಹೆದ್ರಿಕೆ ಆದೆ. ಅಂವ ರೌಡಿಗಳನ್ನ ಕರ್‌ಸಿ ವಿಷಯ ತಿಳಿಸಿ ಚಂಗುಮಣಿನ ಕೊಲ್ಲಿಕೆ ಪ್ಲಾನ್ ಹೇಳಿಕೊಟ್ಟ್, ಐದ್ ಸಾವಿರ ರೂಪಾಯಿನು ಕೋವಿನೂ ಕೊಟ್ಟದೆ.......

ಮುಂದೆ ನೀವ್ ಓದಕು

ಚಂಗುಮಣಿಗೆ ತುಂಬಾ ಸುಸ್ತಾಗಿತ್. ಮೊಣ್ಣಯ್ಯ ರಸ್ತೆ ಬದಿ ಇಟ್ಟಿದ್ದ ಕಳ್ಳ್ ಅವನ ಕಣ್ಣಿಗೆ ಬೀತ್. ಅಂವ ಅದ್‌ನ ಬಿಚ್ಚಿ ನೋಡ್‌ತ್. ಒಂದ್ ಐದಾರ್ ಒಡೆ ತಿಂದ್, ಅರ್ಧ ಕುಪ್ಪಿ ಇಳ್ಸಿತ್. ಮೂರ್ನಾಕ್ ಬೇಸಿದ ಮೊಟ್ಟೆನೂ ತಿಂದತ್, ನಾಲ್ಕೈದ್ ಚುಟ್ಟನ ತಿಂದತ್. ಅಲ್ಲಿಂದ ತನಗೆ ಬೇಕಾದವರ್ನ ಹುಡ್ಕಿಕಂಡ್ ನಡ್‌ತ್.

* * *

ರತೀಶ್‌ನ ಮನೆಲಿ ನಾಕ್ ಜನ ಜೊತೆ ಸೇರಿಯೊಳೊ. ಎಸ್. ಐ. ರಾಮಮೂರ್ತಿ, ರಾಜಕೀಯ ನಾಯಕ ದಿವಾಕರ, ಬೋರ್‌ಗುಡ್ಡೆ ದೇವಯ್ಯ, ಅಡ್ವೋಕೇಟ್ ರತೀಶ್.

ಚಂಗುಮಣಿ ಲಾಕಪ್‌ದ ತಪ್ಪಿಸಿಕಂಡ ವಿಚಾರ ತಿಳಿದ ದಿನದಿಂದ ಅವು ನಾಕ್ ಜನ್‌ದ್ ನೆಮ್ಮದಿ ಹಾಳಾಗಿ ಹೋಗುಟ್ಟು.

ಹಂಗೆ ಈಗ ಬಚಾವಾದುತ ಹೇಳ್‌ವ ವಿಚಾರಲಿ ಚರ್ಚೆ ನಡೆಸ್ತಾ ಒಳೊ.

"ಆ ಚಂಗುಮಣಿನ ಅರೆಸ್ಟ್ ಮಾಡದೆ ಹೋದ್ರೆ ನಮ್ಮನ್ನ ನಾಕ್ ಜನ್ರನ ಅಂವ ಬುಡಕಿಲ್ಲೆ."

ಅಡ್ವೋಕೇಟ್ ರತೀಶ್ ಹೇಳ್‌ತ್.

"ಏಯ್, ಅವನ ತಂಗಿನ ನಾವ್ ನಾಕ್ ಜನ ಸೇರಿ ಕೊಂದದ್‌ತ ಅವಂಗೆ ಗೊತ್ತಿಲ್ಲೆಲ್ಲಾ! ದೇವಯಣ್ಣ ಮಾತ್ರ ಎಚ್ಚರ ತಗಂಡ್ರೆ ಸಾಕ್. ಎರಡ್ ಮೂರ್ ದಿನದ ಒಳಗೆ ನಾವು ಅವನ ಹಿಡಿಯದೆ ಬುಡಕಿಲ್ಲೆ" ಎಸ್. ಐ. ರಾಮಮೂರ್ತಿ ಹೇಳ್ತ್.

"ಪೋಲಿಸರ ವಿಷಯ ಬಿಡು ಮಾರಾಯ ! ಅದೆಲ್ಲ ನಂಗೆ ಗೊತ್ತುಟ್ಟು" ದೇವಯ್ಯ ಹೇಳ್‌ತ್.

"ಪೋಲೀಸ್ ಎಂತಕ್ಕೆ ಆದೆ ಮಾರಾಯ ಕಳ್ಳಂಗೆ ಅನ್ನ ಕೊಡಿಕೆ ಅಲ್ಲದೆ....." ಮತ್ತಕೆ ಆದೆ ಹೇಳ್.

ಬೋರ್‌ಗುಡ್ಡೆ ದೇವಯ್ಯನ ಆ ಮಾತ್ ಮಾತ್ರ ಎಸ್. ಐ. ರಾಮಮೂರ್ತಿಗೆ ಹಿಡಿಸದೇ ಹೋತ್.

"ಇಂದ್ ನಾನ್ ಹೋಂ ಮಿನಿಸ್ಟ್ ಒಟ್ಟಿಗೆ ಮಾತಾಡಿ ನಾಳೆ ಸಾಯಂಕಾರದ ಒಳಗೆ ಆ ಚಂಗುಮಣಿನ ಅರೆಸ್ಟ್ ಮಾಡಿಕೆ ಏರ್ಪಾಡ್ ಮಾಡ್ಸಿನೆ." ರಾಜಕಾರಣಿ ದಿವಾಕರ್ ಹೇಳ್‌ತ್.

"ಅಂದರೆ ನೀವು ಇಲ್ಲಿ ಹರಟೆ ಹೊಡ್ಕಂಡ್ ಇಲ್ಲಿ ಕುದ್ದ್‌ಕಂಡ್ ಇರಿ. ನಾನೊಮ್ಮೆ ಮನೆಗೆ ಹೋಗಿ ಬನ್ನೆ" ಬೋರ್‌ಗುಡ್ಡೆ ದೇವಯ್ಯ ಹೊರಟತ್.

"ನೀವು ಹೋದರೆ ಇತ್ತ ಬಂದರೆ ತಾನೆ?"

"ನಾನ್ ಹೋಗಿ ಪೋನ್ ಮಾಡ್ನೆ ಮಾರಾಯ" ದೇವಯ್ಯ ಕಾರಿಗೆ ಹತ್ತಿತ್. ಬಂಗ್ಲೆಗೆ ಹೋತ್. ಯಾಗ ಬೇಕಾದ್ರು ಕೈಗೆ ಸಿಕ್ಕೋ ಹಂಗೆ ರಿವಾಲ್ವರ್‌ನ ತನ್ನ ಸೀಟ್‌ಲ್ಲೇ ಇಟ್ಟ್ ಚಂಗುಮಣಿ ರತೀಶನ ಮನೆ ಕಾಂಪೌಂಡ್ ಗೋಡೆ ಹಾರಿ ಕೊತ್ತಿ ಹೆಜ್ಜೆಲಿ ಒಳಗೆ ಹೋತ್.

(ಮುಂದ್‌ವರ್ದದೆ)

## ನಗೆಹನಿ

**ಮೇಷ್ಟ್ರು :** ಗುಂಡಾ ಈ ಚಾರ್ಟ್‌ನಲ್ಲಿ ಆಫ್ರಿಕಾ ಖಂಡ ತೋರಿಸೋ

**ಗುಂಡ :** ಆಗೋದಿಲ್ಲಾ ಮೇಷ್ಟ್ರೇ

**ಮೇಷ್ಟ್ರು :** ಯಾಕೋ

**ಗುಂಡ :** ನೋಡಿ ಸಾರ್ ಆಫ್ರಿಕಾ ಕಗ್ಗತ್ತಲ ಖಂಡ ಅಲ್ವ ಮತ್ತೆ ಅಲ್ಲಿ ಕತ್ತಲಿರುತ್ತದೆ. ಅದು ಕಾಣಿಸೋದೇ ಇಲ್ಲ.

* * *

ಪ್ರೊಫೆಸರ್ ಗುಂಡಣ್ಣ ತಮ್ಮ ಮರೆವಿಗಾಗಿ ತುಂಬಾ ಪ್ರಸಿದ್ಧರು. ಒಂದು ದಿವಸ ಏನೋ ವಿಚಾರ ಮಾಡುತ್ತಾ ಕಾಲೇಜಿಗೆ ಹೋಗುವ ಬದಲು ತಮ್ಮ ಮನೆಗೆ ಮರಳಿದರು. ಬಾಗಿಲು ತಟ್ಟಿದರು. ಒಳಗಿನಿಂದ ಹೆಂಡತಿಯ ಧ್ವನಿ. "ಪ್ರೊಫೆಸರ್ ಮನೆಯಲ್ಲಿಲ್ಲ ಆಮೇಲೆ ಬನ್ನಿ"

"ಹಾಗೇ ಆಗಲಿ" ಎಂದು ಹೊರಟೇ ಬಿಟ್ಟರು

ಪಿ. ಟಿ. ಪ್ರದೀಪ, ಮರಗೋಡು

**ಟೀಚರ್ :** ನೀರಿನ ಸೂತ್ರವೇನು?

**ವಿದ್ಯಾರ್ಥಿ :** H, I, J, K, L, M, N, O.

**ಟೀಚರ್ :** ನಿನಗೆ ಯಾರೋ ಹೇಳಿದ್ದು ಹಾಗಂತ?

**ವಿದ್ಯಾರ್ಥಿ :** ನೀವೇ ಮೇಡಂ.

**ಟೀಚರ್ :** ಏನಂತ ಹೇಳಿದ್ನೋ?

**ವಿದ್ಯಾರ್ಥಿ :** H to O ಅಂತ ಹೇಳಿದ್ರಲ್ಲಾ

(ನೀರಿನ ಸೂತ್ರ H2O)

ಅಂವ : ನನ್ನ ಹೆಣ್ಣ್‌ಗೆ ಸಿಟ್ಟ್ ಬಂದರೆ ಪಾತ್ರೆಗಳ್ನ ನೆಲಕೆ ಕುಕ್ಕಿ ಜೋರು ಸದ್ದ್ ಮಾಡ್ತ್ದೆ.ರ. ಅದ್ಕೆ

ಇಂವ ಹೇಳ್ತ್ : ನೀನ್ ತುಂಬ ಲಕ್ಕಿ ಮಾರಾಯ ನನ್ನ ಹೆಣ್ಣ್ ಸಿಟ್ಟ್ ಬಂದರೆ ದವಡೆನ ಪರಚಿದೆರ ತ ಹೇಳಿ ಹಿಂದಿನ ದಿನ ಪರಚಿಸಿಕಂಡ ದವಡೆನ ತೋರ್ಸಿದೆ.

* * *

ಮಾಸ್ಟ್ ಒಬ್ಬನ ಮಕ್ಕ ಶಾಲೆಗೆ ಬಾದು ಯಾಕೆ ಗೊತ್ತುಟತ ಕೇಳ್ದೆ

ಅದ್ಕೆ ಒಬ್ಬ ಎದ್ದ್ ಹೇಳ್ದೆ. "ಕದ್ದ್ ಬೀಡಿ ಸೇದುದ್ ಹೆಂಗೇತಾ, ಕಲಿಯಕೆ ಸಾರ್"

**ಕುಟ್ಟನ ದೀಪಕ್ ಸೋಮಯ್ಯ, ಬೆಂಗಳೂರು**

ಮೇಷ್ಟ್ರು ಕ್ಲಾಸ್ಸಿಲಿ ಶಿಷ್ಯನೊಟ್ಟಿಗೆ 'ಆಕಾಶಲಿ ಏಕಕಾಲಲಿ ಮಿಂಚು ಮತ್ತೆ ಗುಡುಗು ಉಂಟಾದ್ರೂ ನಾವ್ಗೆ ಮಿಂಚು ಸುರುಗೆ ಕಂಡು ಗುಡುಗು ನಂತರ ಕೇಳ್ಸಿದಲ್ಲಾ ಯಾಕೆ?

ಆಗ ಶಿಷ್ಯ ಕಣ್ಣು ಮುಂದೆ ಇದ್ದು ಕಿವಿ ಹಿಂದೆ ಇರ್‌ದ್‌ರಿಂದ ಸಾರ್ ತೇಳ್ತು

* * *

ಸುಮ : ಗಂಡನೊಟ್ಟಿಗೆ 'ಶಹಜಹಾನ್ ತನ್ನ ಹೆಣ್ಣ್‌ನ ನೆನಪಿಗಾಗಿ ತಾಜ್‌ಮಹಲ್ ಕಟ್ಟಿಸಿದೊ. ನೀವು ನನ್ನ ನೆನಪಿಗೆ ಏನ್ ಕಟ್ಟಿಸಿರೆ

ಗಂಡ : ನಿನ್ನ ತಂಗಿ ರಮನ ಕಟ್ಟಿಕಣೆ ಅಂತೇಳ್ತ್

ಸಂಗ್ರಹ : ಮಳ್ಳನ ಎಸ್. ವಸಂತ್(ವಿನು) ಮುಕ್ಕಂಡೂರು

# ದಕ್ಷಿಣ ಕರ್ನಾಟಕದ ಸಾಂಸ್ಕೃತಿಕ ನೆಲೆವೀಡು, ಕಲ್ಲು ಕಲ್ಲು ಕತೆ ಹೇಳುತ್ತಿರುವ ನಾಡು ಗಡಿನಾಡ ಜಿಲ್ಲೆ ಹಾಸನದಲ್ಲಿ ಕೈಲ್‌ಪೋಳ್ದ್ ಹಬ್ಬ, ಸ್ಫೂರ್ತಿಗೊಂಡ ಜನತೆ

ಸುಮಾರು ಇಪ್ಪತ್ತೊಂದು ವರ್ಷಗಳಿಂದಲೂ ಕೊಡಗಿನ ನೆರೆ ಜಿಲ್ಲೆಯಾದ ಹಾಸನದಲ್ಲಿ ಮೌನಿಯಾಗಿಯೇ ತನ್ನ ಕೈಲ್‌ಪೋಳ್ದ್ ಹಬ್ಬವನ್ನು ಆಚರಿಸಿಕೊಂಡು ಬರುತ್ತಿರುವುದು ಸಾಮಾನ್ಯವಾಗಿ ಕೊಡಗಿನ ನಮ್ಮ ಹೆಚ್ಚಿನ ಜನರಿಗೆ ತಿಳಿದಿರಲಿಕ್ಕಿಲ್ಲ. ಈಗ್ಗೆ ನಾಲ್ಕೈದು ವರ್ಷಗಳಿಂದ ಸ್ಫೂರ್ತಿಗೊಂಡು ಜನತೆಯ ಚಟುವಟಿಕೆಗಳನ್ನು ಕಣ್ಣಾರೆ ಕಂಡು ವೀಕ್ಷಿಸಿದ ಫಲವಾಗಿಯೇ ಏನೋ ಹಾಸನದಲ್ಲಿ ನೆಲೆಸಿರುವ ಕೊಡಗಿನ ಬಾಂಧವರ ಜೊತೆಯಲ್ಲಿಯೇ, ದಕ್ಷಿಣ ಕನ್ನಡದ ಅರೆಭಾಷಿಕರು, ಹಾಸನ ಜಿಲ್ಲೆಯ ಸಂಬಂಧ ಬೆಳೆಸಿದ ಬಾಂಧವರೆಲ್ಲರು ಜೊತೆಯಾಗಿಯೇ ಹೊರಗಿನಿಂದ ಅತಿಥಿಗಳನ್ನು ಕರೆಸಿ ಅದ್ದೂರಿಯಾಗಿ ದಿನಾಂಕ 19-9-1999ರಲ್ಲಿ ಕೈಬೀಲಿರ ಪೊನ್ನಣ್ಣನವರ ಉದಾರತನದ, ಸಮರ್ಥ ಸಾರಥ್ಯದಲ್ಲಿ ನಡೆಸಿರುವುದು ಈವರ್ಷ ಹಾಸನದ ಕೈಲ್ ಪೋಳ್ದ್‌ನ ವಿಶೇಷ ಆಕರ್ಷಣೆಯಾಗಿತ್ತು.

ಸುಮಾರು ಇನ್ನೂರೈವತ್ತಕ್ಕೂ ಮಿಕ್ಕಿ ಸೇರಿದ ಈ ಅದ್ದೂರಿಯ ಸಮಾರಂಭವು ಬೆಳಿಗ್ಗೆ ಹತ್ತು ಗಂಟೆಗೆ ಆಟೋಟಗಳ ಕ್ರೀಡೆಯೊಂದಿಗೆ ಪ್ರಾರಂಭವಾಗಿ ಕಾಳು ಹೆಕ್ಕುವುದು, ಚಿಕ್ಕಮಕ್ಕಳಿಗೆ, ನಾಲ್ಕೈದು ಬಗೆಯ ಓಟಗಳು, ಕಣ್ಣಿಗೆ ಬಟ್ಟೆ ಕಟ್ಟಿ ಮಡಿಕೆ ಒಡೆಯುವುದು, ಕಾಯಿಗೆ ಕಲ್ಲು ಹೊಡೆಯುದು ಇನ್ನಿತರ ಹಲವಾರು ಆಕರ್ಷಕ ಕ್ರೀಡೆಗಳು, ನೆರೆದ ಜನರನ್ನು ರಂಜಿಸಿದವು.

ಕ್ರೀಡಾ ಕೂಟಗಳ ನಂತರ ಸಭೆಯು ಪ್ರಾರಂಭವಾಯ್ತು. ಸಭೆಯ ಅಧ್ಯಕ್ಷತೆಯನ್ನು ಶ್ರೀ ಕೈಬೀಲಿರ ಪೊನ್ನಣ್ಣನವರು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಬೆಂಗಳೂರಿನ ಕಾವೇರಿನಾಡಿನ ಸಂಸ್ಥಾಪಕ ಶ್ರೀ ಅಮ್ಮಾಜೀರ ಪೊನ್ನಪ್ಪ ಹಾಗೂ ಲೀಲಾವತಿ ದಂಪತಿಗಳು ಮತ್ತು ಮೈಸೂರಿನಿಂದ ಕೊಡಗು ಸಂಗಾತಿ ಪತ್ರಿಕೆಯ ಸಂಪಾದಕಿ ಶ್ರೀಮತಿ ಪಟ್ಟಡ ಶೀಲಾಮಣಿ ಹಾಗೂ ಗೌರವ ಸಂಪಾದಕ ಶ್ರೀ ಪಟ್ಟಡ ಪ್ರಭಾಕರ ನವರು ಆಗಮಿಸಿದ್ದರು. ವೇದಿಕೆಯ ಮೇಲೆ ಹಾಸನದ ಕೊಡಗು ಮತ್ತು ದ. ಕ. ಜಿಲ್ಲಾ ಗೌಡ ವಿದ್ಯಾಸಂಘದ ಕಾರ್ಯದರ್ಶಿ ಕಲ್ಲುಮುಟ್ಲು ಗಣೇಶ್‌ನವರು ಉಪಸ್ಥಿತರಿದ್ದರು.

ಮುಖ್ಯ ಅತಿಥಿಗಳು ತಮ್ಮ ಭಾಷಣದಲ್ಲಿ ಮುಖ್ಯವಾಗಿ ಅರೆಭಾಷೆ, ಸಂಸ್ಕೃತಿ, ಕೊಡಗು ಮತ್ತು ಕನ್ನಡ ಜಿಲ್ಲೆಯೆಂಬ ಭಿನ್ನತೆ ಸಲ್ಲದೆಂದೂ, ಕಿರಿಯರಿಗೆ ಸಂಸ್ಕೃತಿ ಬಗ್ಗೆ ಮಾತಾಪಿತೃರೆ ಕಲಿಸುವಂತೆಯೂ, ಒಗ್ಗಟ್ಟಿನಿಂದ ಕೆಲಸ ಸಾಧಿಸಬೇಕೆಂದು, ತಮ್ಮನ್ನು ತಾವೇ ಗುರ್ತಿಸಿ ಕೊಂಡು ಮುಂದುವರಿಯುವಂತೆಯೂ ಕರೆ ನೀಡಿದರು. ಯಾವುದೇ ಕಲೆ ಇರಲಿ ಯಾವುದೇ ಬರಹವಿರಲಿ ಸಾಹಿತ್ಯದಲ್ಲಿ ಬೆಳೆಯಲು ಚಿಕ್ಕ ವೇದಿಕೆಯಾಗಿ ಕೊಡಗು ಸಂಗಾತಿ ಪತ್ರಿಕೆ ಇದೆ. ಅದನ್ನು ಸಮರ್ಥವಾಗಿ ಬೆಳೆಸಿಕೊಳ್ಳುವಂತೆ ಕರೆ ನೀಡಲಾಯಿತು. ಸಂಗಾತಿಯಲ್ಲಿ ಈಗಾಗಲೇ ಸುಮಾರು ನೂರೈವತ್ತು ಹಿರಿ, ಕಿರಿ ಬರಹಗಾರರು ಲೇಖಕರ ರೂಪದಲ್ಲಿ ಕಾಣಿಸಿ ಕೊಂಡಿದ್ದಾರೆ. ಇವರೆಲ್ಲರನ್ನು ಒಂದೆಡೆ ಸೇರಿಸಿದರೆ ಅರೆಭಾಷೆ ಅಕಾಡೆಮಿ ರಚನೆಗೆ ಸಹಕಾರಿಯಾಗುವುದೆಂದು, ಮುಂದೆ ಐದು ಹತ್ತು ವರ್ಷಗಳಲ್ಲಿ ಕೊಡಗಿನಲ್ಲಿ ಸಾಕಷ್ಟು ಸಾಹಿತಿಗಳು ಹುಟ್ಟಿದಾಗ ನಮ್ಮ ರಕ್ಷಣೆಗೆ ಅದುವೇ ಶ್ರೀರಕ್ಷೆ ಎಂದು ಸಂಗಾತಿಯು ಅಭಿಪ್ರಾಯ ಪಟ್ಟಿತು.

ಬೆಂಗಳೂರಿನಿಂದ ಆಗಮಿಸಿದ ಶ್ರೀ ಬಿಟ್ಟೀರ ಚೊಂದಮ್ಮ ಶಂಭು, ಇವರ ಸ್ವರಚಿತ ಕವನ "ನಮ್ಮ ಕೊಡಗಿದು ನಮ್ಮದು, ಬಲು ಹೆಮ್ಮೆಯ ಕೊಡಗಿದು ನಮ್ಮದು" ಹಾಡನ್ನು ಹಾಡಿ ಎಲ್ಲರನ್ನು ರಂಜಿಸಿದರು. ಆಟೋಟಗಳಲ್ಲಿ ಭಾಗವಹಿಸಿದ ಹಿರಿ ಕಿರಿಯರೆಲ್ಲರಿಗೂ ಬಹುಮಾನವನ್ನು ನೀಡಲಾಯಿತು.

ನಂತರ ಪರ್ಲಕೋಟಿ ಸುಬ್ಬಮ್ಮನವರು, ಮುಖ್ಯ ಸುಶ್ರೂಶಕಿ, ನಿವೃತ್ತಿ ಇವರು ಹಾಸನದಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ಅಭಿಮಾನದಿಂದ ಗೌಡ ಸಂಘಟನೆಗೆ ರೂ. 1,000/- ದೇಣಿಗೆಯಿತ್ತು ಇಪ್ಪತ್ತೊಂದು ವರ್ಷಗಳ ಹಿಂದೆ ಸ್ಥಾಪಿಸಲಾಯಿತೆಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತಾರೆ. ಹಾಗೂ ನಿವೃತ್ತಿ ನಂತರ ಈಗ ಮಡಿಕೇರಿಯ ಸಮೀಪದ ಬಿಳಿಗೇರಿ ಗ್ರಾಮದಲ್ಲಿ ನೆಲೆಸಿದ್ದರು ಸಹ ಪ್ರತಿ ವರ್ಷ ತಪ್ಪದೇ ಹಾಸನದ ಕೈಲ್ ಪೋಳ್ದ್ ಹಬ್ಬಕ್ಕೆ ಬರುವುದು ವಾಡಿಕೆ. ಈ ವರ್ಷವು ಸಹ ಬಂದು ಹಾಸನದ ಸಂಘದ ಕಟ್ಟಡಕ್ಕಾಗಿ ಪುನಃ ರೂ. 1,000/- ಕೊಟ್ಟಿರುವುದು ಪ್ರಶಂಸನೀಯವಾದದ್ದು. ಅಮ್ಮಾಜೀರ ಪೊನ್ನಪ್ಪನವರು ಪೊನಿ ಧ್ವನಿಯ ಇಪ್ಪತ್ತೈದು ಕ್ಯಾಸೆಟ್‌ಗಳನ್ನು ಸಂಘಕ್ಕೆ ದಾನವಾಗಿ ನೀಡಿದರಲ್ಲದೆ ಅದರಿಂದ ಬರುವ ಹಣವನ್ನು ಸಂಘದ ಚಟುವಟಿಕೆಗೆ ಉಪಯೋಗಿಸುವಂತೆ ಕೋರಿದರು. ಅದೇ ಸಂದರ್ಭದಲ್ಲಿ ಕೊಡಗು ಸಂಗಾತಿ ಪತ್ರಿಕೆಯ ಪರವಾಗಿ ರೂ. 1,000/-ವನ್ನು ಸಂಪಾದಕಿ ಪಟ್ಟಡ ಶೀಲಾಮಣಿಯವರು ನೀಡಿದರು. ಚಿಕ್ಕ ಮಕ್ಕಳ ಪ್ರಾರ್ಥನೆಯೊಂದಿಗೆ ಸಭೆಯು ಪ್ರಾರಂಭವಾಗಿ ಕಲ್ಲುಮುಟ್ಲು ಗಣೇಶ್‌ನವರ ವಂದನಾರ್ಪಣೆಯೊಂದಿಗೆ ಸಭೆಯು ಮುಕ್ತಾಯಗೊಂಡಿತು. ನಿರೂಪಣೆಯನ್ನು ಕೊಂಬಾರನ ಬಸಪ್ಪನವರು ಉತ್ತಮವಾಗಿ ನಿರ್ವಹಿಸಿಕೊಟ್ಟರು. ಕ್ರಿಯಾಶೀಲರಾದ ಕೆ. ಯು. ಬಸಪ್ಪ, ಕೆ. ಎಸ್. ಲೋಕನಾಥ್, ಕೆ. ಎಸ್. ಗಣೇಶ್. ಬಿ. ಬಿ. ಹರೀಶ್ ಇವರ ಚಟುವಟಿಕೆಯನ್ನು ಮೆಚ್ಚತಕ್ಕದು. ಸಭೆಯಲ್ಲಿ ಕೊಡಗು, ಕನ್ನಡ ಜಿಲ್ಲೆ, ಹಾಸನದ ತಂದು ಬೆಂದು ಮಾಡಿಕೊಂಡ ಅಳಿಯಂದಿರನ್ನು, ಮಗಳಂದಿರನ್ನು ಪ್ರೋತ್ಸಾಹವನ್ನು ಈ ಸಂದರ್ಭದಲ್ಲಿ ಮೆಚ್ಚಿ ಪ್ರಶಂಸಿಸಲಾಯಿತು. ಐದು ಜೊತೆ ಬಿಳಿ ಕುಪ್ಪಸ ದಟ್ಟೆಯನ್ನು ಹೊಲಿಸಿ ಕೊಡುವಂತೆ ಅಧ್ಯಕ್ಷರಾದ ಪೊನ್ನಣ್ಣನವರು ಶ್ರೀ ಅಮ್ಮಾಜಿಯವರನ್ನು ವಿನಂತಿಸಿ ಕೊಂಡದ್ದು ನಿಜಕ್ಕೂ ಅಭಿಮಾನದ ಸಂಕೇತವಾಗಿದೆ.

ಹಾಸನ ನಗರದಲ್ಲಿ 120 × 80 ಅಡಿಗಳ ಖಾಲಿ ನಿವೇಶನವನ್ನು ಈಗಾಗಲೇ ಕೊಂಡು ಅದರಲ್ಲಿ ಪುಟ್ಟ ಕಟ್ಟಡವನ್ನು ಕಟ್ಟಲು ಶ್ರೀ ಕೈಬೀಲಿರ ಪೊನ್ನಣ್ಣನವರ ಸಾರಥ್ಯಕ್ಕೆ ಸಹಕಾರಿಯಾಗಿ ಕೆ. ಎಸ್. ಲೋಕನಾಥ್, ಕೆ. ಯು. ಬಸಪ್ಪ, ಬಿ. ಬಿ. ಹರೀಶ್, ಕೆ. ಎಸ್. ಗಣೇಶ್ ಹಾಗೂ ಇತರೆ ಸರ್ವರ ಸಹಕಾರದಿಂದ ಕಟ್ಟುವ ಯೋಜನೆಗೆ ಸ್ವಜಾತಿ ಬಾಂಧವರ ಸಹಕಾರವನ್ನು ಕೋರಿದ್ದಾರೆ. ಸರ್ವರು ಈ ನಿಟ್ಟಿನಲ್ಲಿ ತಮ್ಮ ಸಹಕಾರವನ್ನು ನೀಡಿದಾಗ ಪೊನ್ನಣ್ಣನವರ ಮತ್ತು ಸಂಗಡಿಗರ ಆಸೆ ಆಕಾಂಕ್ಷೆಯು ಸಫಲವಾಗುವುದರಲ್ಲಿ ಯಾವ ಸಂಶಯ ಇರುವುದಿಲ್ಲವೆಂದು ಹೇಳಬಹುದು. ಇವರೆಲ್ಲರ ಮನದಿಂಗಿತವು ಅದು ಬೇಗ ಸಫಲವಾಗಲಿ ಎಂದು ಸಂಗಾತಿ ಮುಕ್ತ ಕಂಠದಿಂದ ಹಾರೈಸುತ್ತದೆ.

– ಸಂಗಾತಿ ವರದಿ






✦ ಕೌಂಡಿನ್ಯ

ಧಾರವಾಹಿ -15

ಅದು ಕಾಡಿನ ಹಾದಿ !

ಸಂಜೆ ಆರು ಗಂಟೆಯ ಸಮಯ !

ತಂಗಾಳಿ ಹಿತವಾಗಿ ಬೀಸುತ್ತಿದೆ.

ಬೃಹದಾಕಾರದ ಮರಗಳ ನಡುವೆ ವ್ಯಕ್ತಿಯೊಂದು ನಡೆಯುತ್ತಿದೆ. ಕೇಳಿ ಬರುತ್ತಿದೆ ತರಗೆಲೆಗಳ ಮೇಲಿನ ಹೆಜ್ಜೆ ಶಬ್ದ !

ಚರಕ್......... ಪರಕ್ ಚರಕ್ !

ಆ ವ್ಯಕ್ತಿ ಆಗಾಗ ಹಿಂತಿರುಗಿ ನೋಡುತ್ತಾ ಬಿರು, ಬಿರನೆ ಕಾಡಿನ ಹಾದಿಯಲ್ಲಿ ನಡೆಯುತ್ತಿದೆ

ಅದು ಹೂವಿನ ತೋಟ !

ನಿಶ್ಯಬ್ಧತೆಯ ಏಕಾಂತ ಸನ್ನಿವೇಶ !

ಅಲ್ಲಿಗೆ ಬಂದು ನಿಂತು ಹೂವಿನ ಗಿಡಗಳ ನಡುವೆ ನೋಡಿತು ಆ ವ್ಯಕ್ತಿ ! ಅಲ್ಲಿ ಮತ್ತೊಂದು ವ್ಯಕ್ತಿ ಇತ್ತು !

ಅವರಿಬ್ಬರು ಹತ್ತಿರ ಬಂದರು.

ಒಂದು ಗಂಡು ! ಒಂದು ಹೆಣ್ಣು !

ಗಂಡು ಈಗ ಅವಳನ್ನು ತಬ್ಬಿಕೊಂಡು ಗಿಡಗಳ ನಡುವೆ ನಡೆಯಿತು. ಅವರಿಬ್ಬರು ಹುಲ್ಲಿನ ಮೇಲೆ ಕುಳಿತರು.

ಹೊರಗೆ ಏನೂ ಸಹ ಕಾಣಲಿಲ್ಲ !

ಹೂವಿನ ಗಿಡಗಳು ಮರೆಯಾಗಿವೆ !

ಹೆಣ್ಣು ಈಗ ಭಯ, ಗಾಬರಿಯಿಂದ "ಯಾರಾದರೂ ನೋಡಿದರೆ ಕಷ್ಟ. ಬೇಗ, ಬೇಗ ಹೇಳು"

ಗಂಡು ಅವಳ ತುಟಿಗಳನ್ನು ಚುಂಬಿಸುತ್ತಾ "ನನಗೆ....... ನನಗೆ ಇದು ಬೇಡ ಎಂಬ ಮಾತು"

ಅವಳು ಕೋಪದಿಂದ "ಅದಕ್ಕೆ ಇದು ಸಮಯ ಅಲ್ಲ. ರಾತ್ರಿ ನನ್ನ ರೂಮಿಗೆ ಬನ್ನಿ."

"ಪ್ಲೀಸ್........ ಪ್ಲೀಸ್"

ಅವಳು ಅವನನ್ನು ನೋಡುತ್ತಾ "ನೋಡಿ ಇವತ್ತು ರಾತ್ರಿ ನೀವು ಆ ಕೆಲಸವನ್ನು ಮಾಡಿ ಮುಗಿಸಲೇ ಬೇಕು."

"ಖಂಡಿತಾ ಮಾಡುತ್ತೇನೆ"

ಅವಳು ಅವನ ಕೆನ್ನೆ ಚುಂಬಿಸುತ್ತಾ "ನೀವು ಇದೊಂದು ಕೆಲಸ ಮಾಡಿ ಮುಗಿಸಿದರೆ ಸಾಕು. ಮುಂದೆ ನಾವಿಬ್ಬರು ತುಂಬಾ ಸುಖವಾಗಿ ಬದುಕಬಹುದು."

ಗಂಡು ತಲೆಯಾಡಿಸಿದನು.

ಅವಳು ವಿವರಿಸುತ್ತಿದ್ದಾಳೆ !

ಅದೊಂದು ಮರ್ಡರ್ ಪ್ಲಾನ್ !

ಅವಳು ಎಲ್ಲಾ ಹೇಳಿ ಮುಗಿಸಿದ ನಂತರ "ಏಳಿ....... ಇನ್ನು ನಾವಿಬ್ಬರು ಒಂದೇ ಕಡೆ ಇಲ್ಲಿರಬಾರದು...."

ಇಬ್ಬರೂ ಅಲ್ಲಿಂದ ಹೊರ ಬಂದರು.

ವಿರುದ್ಧ ದಿಕ್ಕಿನಲ್ಲಿ ನಡೆಯುತ್ತಿದ್ದಾರೆ.

ಈ ದೃಶ್ಯವನ್ನು ಮರದ ಹಿಂದೆ ನಿಂತಿದ್ದ ಮತ್ತೊಂದು ವ್ಯಕ್ತಿಯೊಂದು ಆಕಸ್ಮಿಕವಾಗಿ ನೋಡಿತು !

ಆ ವ್ಯಕ್ತಿಗೆ ನಂಬಿಕೆಯೇ ಬರುತ್ತಿಲ್ಲ !

ಭಯ........ ಆಶ್ಚರ್ಯ...... !

ಆ ವ್ಯಕ್ತಿ ಪ್ರಸನ್ನ !

ಪ್ರಸನ್ನ ತತ್ತರಿಸಿ ಹೋಗುತ್ತಿದ್ದಾನೆ. ಏಕೆ ಅಂದರೆ ಅವನು ಈಗ ತಾನೇ ನೋಡಿದ್ದ ಗಂಡು ಹೆಣ್ಣು ಬೇರೆ ಯಾರೂ ಸಹ ಅಲ್ಲ ! ಇವನ ಅಕ್ಕ ಅರುಂಧತಿ !

ಗಂಡ ಅರೆ ಹುಚ್ಚ ಭಾವ !

ಪ್ರಸನ್ನನಿಗೆ ಸತ್ಯ ತಿಳಿದಿತ್ತು !

ತನ್ನ ಭಾವ ನಾಟಕ ಆಡುತ್ತಿದ್ದಾನೆ !

ಅವನು ಅರೆ ಹುಚ್ಚ ಅಲ್ಲ !

ಅಲ್ಲದೆ ಅವರಿಬ್ಬರು ಆಡಿದ್ದ ಮಾತುಗಳನ್ನು ಕೇಳಿಸಿಕೊಂಡು ಪ್ರಸನ್ನ ಚಳಿ ಬಂದವರಂತೆ ನಡುಗಿದನು.

ಮರುಕ್ಷಣ ಕೋಪ ಉಕ್ಕೇರಿತು !

ಯಾಕೆ ಅಂದರೆ ಅರುಂಧತಿ ಮತ್ತು ಅವಳ ಗಂಡ ಮಂಜಯ್ಯ ಸೇರಿಕೊಂಡು ಕೊಲೆ ಮಾಡಬೇಕು ಅಂತ ಪ್ಲಾನ್ ಮಾಡುತ್ತಿದ್ದರು.

ಆ ರಾತ್ರಿ ಮತ್ತೊಂದು ಕೊಲೆಗೆ ಆಲೋಚನೆ !

ಪ್ರಸನ್ನ ಬಲಿ ಪಶು !

ಸ್ವಂತ ಸಹೋದರನನ್ನೇ ಆ ರಾತ್ರಿ ಕೊಲೆ ಮಾಡಲು ಅರುಂಧತಿ ತನ್ನ ಗಂಡನ ಮೂಲಕ ಪ್ರಯತ್ನಿಸುತ್ತಿದ್ದಳು.

* * *

ಅರೆ ಹುಚ್ಚ ಮಂಜಯ್ಯ !

ಮರದ ಅಡಿಯಲ್ಲಿ ನಿಂತುಕೊಂಡು ಸಿಗರೇಟ್ ಅನ್ನು ಸೇದಿ ಬಿಸಾಕಿ ಅಲ್ಲಿಂದ ಬಿರು, ಬಿರನೆ ನಡೆದನು.

ಅದು ಮಾವಿನ ತೋಪಿನ ಹಾದಿ !

ಮಬ್ಬುಗತ್ತಲು ಆವರಿಸುತ್ತಿದೆ !

ಆ ರಾತ್ರಿ ತಾನು ಯಾವ ರೀತಿ ಪ್ರಸನ್ನನ್ನು ಕೊಲೆ ಮಾಡಬೇಕು ಎಂದು ಚಿಂತಿಸುತ್ತಾ ನಡೆಯುತ್ತಿದ್ದಾನೆ.

ಪ್ರಸನ್ನ ಸಾಯಬೇಕು !

ಅವನು ಸತ್ತರೆ ಅವನ ಹತ್ತಿರ ಇರುವ ಲಕ್ಷಾಂತರ ರೂಪಾಯಿ, ಹಣ, ಒಡವೆಗಳು ಸಹ ಸಿಗುತ್ತದೆ !

ಅಷ್ಟೇ ಅಲ್ಲ !

ಪುನಃ ನಿಧಿ ಸಿಗುತ್ತದೆ !

ಏಡತೊರೆ ಮನೆತನದವರು ದಿಢೀರ್ ಅಂತ ಶ್ರೀಮಂತರಾಗಲು ಕಾರಣ ಅವರಿಗೆ ದೊರೆತ ನಿಧಿ !

ನಿಧಿ ಪೂರ್ತಿಯಾಗಿ ದೊರೆತಿರಲಿಲ್ಲ !

ಅರ್ಧ ಭಾಗ ಕೈ ಸೇರಿತ್ತು !

ಅರ್ಧ ಭಾಗ ಭೂಮಿಯಲ್ಲಿ ಎಲ್ಲೋ ಒಂದು ಕಡೆ ಇದೆ. ಅಂದರೆ ಇದೇ ಊರಿನಲ್ಲಿ ಅದು ಪ್ರಸನ್ನನಿಗೆ ಗೊತ್ತಿದೆ !

ಇಲ್ಲಿಯವರೆಗೆ.........

ಮಾವಿನ ತೋಪಿನಲ್ಲಿ ರೇವತಿ ಪ್ರಸನ್ನನ ಜೊತೆ ಗೆಳತಿ ಬರೆದಿರುವ ಡೈರಿಯ ಬಗ್ಗೆ ಮಾತನಾಡುತ್ತಾಳೆ. ಮೀನಳ ಸಾವಿಗೆ ಪ್ರಸನ್ನ ಕಾರಣ ಎಂದು ರೇವತಿ ಆರೋಪಿಸುತ್ತಾಳೆ. ಆದರೆ ಪ್ರಸನ್ನ ಅದನ್ನು ಸಾರಸಗಟು ನಿರಾಕರಿಸುತ್ತಾನೆ.

ಮುಂದೆ ಓದಿ..........

ಅದರ ನಕ್ಷೆ ಅವನ ಹತ್ತಿರ ಇದೆ !

ಪ್ರಸನ್ನನನ್ನು ಕೊಂದರೆ ಈಗ ಇರುವ ಹಣ, ಒಡವೆಗಳೊಂದಿಗೆ ನಿಧಿಯ ನಕ್ಷೆ ಸಹ ಸಿಗುತ್ತದೆ !

ಈ ಹುಚ್ಚನ ನಾಟಕ ಮುಗಿಯುತ್ತದೆ !

ಕೆಲವು ಕೋಟಿಗಳ ಶ್ರೀಮಂತಿಕೆ !

ನಿಂತಲ್ಲೇ ಕನಸು ಕಾಣುತ್ತಿದ್ದಾನೆ !

ಆಗ ಹಿಂದಿನಿಂದ ಕೇಳಿಸಿತು ಹೆಜ್ಜೆಯ ಶಬ್ದ ! ಯಾರೋ...... ಯಾಕೋ ತೀರಾ ಸಮೀಪದಲ್ಲೇ ಬರುತ್ತಿದ್ದಾರೆ !

ಚರಕ್...... ಪರಕ್...... ಚರಕ್ !

ಮಂಜಯ್ಯ ಬೆಚ್ಚಿ ಬಿದ್ದು ಹಿಂತಿರುಗಿದನು.

ಅಲ್ಲಿ..... ಮರದ ಹತ್ತಿರ ವ್ಯಕ್ತಿಯೊಂದು ನಿಂತುಕೊಂಡಿತ್ತು !

ಆ ವ್ಯಕ್ತಿ ನಗುತ್ತಿದೆ !

ನಗುವಿನಲ್ಲಿ ಕ್ರೂರತೆ !

ಮಂಜಯ್ಯನ ಹತ್ತಿರ ಬರಲಾರಂಭಿಸಿತು.

ಭಯದಿಂದ ಹಿಂದೆ ಸರಿಯುತ್ತಿದ್ದಾನೆ !

ಆ ವ್ಯಕ್ತಿ ಸರ್ರನೆ ಮುನ್ನುಗ್ಗಿ ಮಂಜಯ್ಯನ ಕತ್ತಿನ ನರದ ಮೇಲೆ ಬಲವಾಗಿ ಹೊಡೆಯಿತು !

ಮಂಜಯ್ಯನ ಕಣ್ಣುಗಳ ಮುಂದೆ ಇಡೀ ನಕ್ಷತ್ರ ಲೋಕವೇ ಕಂಡಂತಾಯಿತು !

ನೆಲಕ್ಕೆ ಕುಸಿಯಲಾರಂಭಿಸಿದನು.

ನೆಲದ ಮೇಲೆ ಬಿದ್ದಿದ್ದ ಮಂಜಯ್ಯನನ್ನು ಎತ್ತಿ ತನ್ನ ಭುಜದ ಮೇಲೆ ಹಾಕಿಕೊಂಡು ನಡೆಯಲಾರಂಭಿಸಿತು ಆ ವ್ಯಕ್ತಿ !

ಆ ವ್ಯಕ್ತಿ ಯಾರು !

ಹೀಗೇಕೆ ಮಾಡುತ್ತಿದೆ !

(ಮುಂದುವರಿಯುತ್ತದೆ)

♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣

## "ಹಂಗಿನ ಅರಮನೆಗಿಂತ ವಿಂಗಡದ ಗುಡಿ ಲೇಸು"

ಜನ್ರ ಎಡೆಲೆ ಬದ್ಕಿಕೆ ಬಾರಿ ಕಷ್ಟ. ಹಿಂದೆ ನಮ್ಮವು ಅದಿಕೆ ಒಂದು ಗಾದೆ ಕಟ್ಟಿದ್ 'ಹೊಳೆಕರೆ ಭೂಮಿನೂ ಬರೆ ಕರೆ ಮನೆನೂ ಇರಿಕೆ ಅಗದ್"ತಾ. ಹಂಗೆ ಈಗ ನೆರೆ ಕರೆಯವರ ಗದ್ದೆ, ತೋಟ ನಮ್ಮ ಮನೆ ಹತ್ರ ಇರಿಕೆ ಆಗದ್, ಹಂಗೆ ಒಟ್ಟೊಟ್ಟಿಗೆ ಮನೆ ಕಟ್ಟಿಕಂಡ್ ಇರಿಕೆ ಆಗದ್ ಅದ್‌ಕ ನಮ್ಮ ಸರ್ವಜ್ಞ ಹೇಳ್ದ "ಹಂಗಿನ ಅರಮನೆಗಿಂತ ವಿಂಗಡದ ಗುಡಿಲೇಸು"ತಾ. ದೂರಲಿ ಒಂದು ಗುಡ್ಸಲ್ ಕಟ್ಟಿಕಂಡ್ ಇದ್ದರೆ ಎಷ್ಟೊ ಉತ್ತಮ. ಯಾಕೆ ತೇಳ್ರೆ ನೋಡಿ ಮನೆವುಕೂ ಮನೆವುಕೂ; ಊರವುಕೂ ನೆರೆಮನೆವುಕೂ ಜಗಳ ಬಾದು ಹಿಂಗೆ ಹತ್ರ ಹತ್ರ ಇದ್ದರೆ ದೂರದ ಬೆಟ್ಟ ನುಣ್ಣಂಗೆ ತೆಳ್ದಂಗೆ ನಾವು ನೆಮ್ಮದಿಂದ ಇರೊಕರೆ ದೂರಲೆ ಇರಕು.

ಅಲ್ಲ ಒಂದು ಮನೆ ತೇಳ್ರೆ ಅಲ್ಲಿ ಎಲ್ಲಾ ಇರೋಕುತಾ ಆಸೆ ಮನೆ ಹೆಣ್ ಜನಂಗೆ ಇದ್ದದೆ. ಕೋಳಿ, ಹಂದಿ, ದನ ಸಾಕೊಕುತಾ. ಕೋಳಿ ಸಾಕುದು ಏಕೆ ತೇಳ್ರೆ ಯಾರಾದರ್ ಕತ್ತಲೆ ಅಕನ, ದುಡ್ಡು ಇಲ್ಲದೆ ಇರ್‌ಕನ ನೆಂಟ್ರ ಬಂದರೆ ಮರಿಯಾದಿ ಕಾಪಾಡ್ದು ಕೋಳಿ. ನೆಂಟ್ರ ಬಾಕನ್ ಕೋಳಿ ಕೊಂದ್, ರೊಟ್ಟಿ ಮಾಡಿ ಲಾಯಿಕ ಇಕ್ಕಿರೆ ನೆಂಟಂಗೆ ನಾನ್ ಬಂದದ್ ಸಾರ್ಥಕತ ಅದೆ. ಕೋಳಿ ಸಾಕಿರೆ ನಾವೇ ತೇಳಿ ಕುದ್ ಲಾಯಿಕ ತಿಂಬದು ದೆವ್ವಕೆ ಕೊಡುಕನ. ನಾವೇ ಕೋಳಿ ಕೊಂದು ತಿಂಬಲೆ ಹೊಟ್ಟೆ, ಬಾಯಿ ಕಟ್ಟಿ ವರ್ಷಗಟ್ಟಲೆ ಸಾಕುದು. ಗಂಡ ಕೋಳಿ ಕೊಲ್ಲೊಮನೆತ ಹೆಣ್‌ನ ಕೇಳ್ರೆ ನೀವು ಸುಮ್ಮನೆ ಇರಿ ಇರ್ದು ನಾಕ್ ಕೋಳಿ, ಒಂದು ಹೂಂಜ ಅದ್ ಕೂಂಗಿಕೆ ಬೇಕು, ಹೆಂಟೆ ಒಂದು ಕಾವು ಕುದ್ದುಟು. ಮತ್ತೆ ಲಾಕಿಗ ಕಾರ್ತಿಂಗ ದೆವ್ವಕೆ ಬೇಕು ತೇಳಿ ಕೊಲ್ಲದೆ ಸಾಕಂದು ಕಡೆಗೆ ಕುದ್‌ಕನೊ, ಕಿರಿನೊ ಹೊರ್ದು. ಮತ್ತೆ ಹೇಳ್ದು ಹೋಗಲಿ ಅತ್ತ ನಮಗೆ ತಿಂಬಕೆ ಋಣ ಇಲ್ಲೆತಾ. ನೆಂಟ್ರ ಬಾಕನ ಕೊಂದರೆ ನಮಿಗೆ ತಿಂಬಕೆ ಸಿಕ್ಕುದು ಎಂತ? ಒಳ್ಳೊಳ್ಳ ತುಂಡು ನೆಂಟ್ರಿಗೆ ಇಕ್ಕುದು. ನಮಿಗೆ ರೆಕ್ಕೆನೋ, ಪುಕ್ಕನೋ ಸಿಕ್ಕುದು. ಕರಿಯಡ, ಪಲ್ಲಕಾಯಿ ಅಜ್ಜಂದರಿಗೆ ಆತ್ ಹಲ್ಲ್ ಇಲ್ಲೆತಾ. ಕೊಲೆಗೆ ತಾ ಜಿಂಟಿ ಬೆಸೆಗೆಲಿ ಮಡ್ಗಿದ ಕರಿಯಡ ತುಂಡ್ ಕೂಸ್‌ಗೆ ಅತ್. ನಾವು ಕಳ್ಳ್‌ನ ಬಾಯಿಗೆ ಕಾಲ್ ಚೀಂಪನೊ ತೇಳ್ರೆ ನೀವು ಕಾಲ್ ತಿಂಬಕೆ ಆಗದ್ ಮರ ಹತ್ತಕನ ಕಾಲ್ ನಡಿಗೆದೆ ತೇಳಿ ಹೆಣ್ಣ ತಿಂದದೆ.

ಈ ಹಾಳಾದ ಕೋಳಿಗಳಂದ ಜಗಳ ಬಾದು ಜಾಸ್ತಿ ಗದ್ದೆ ಬೀಜ ಹಾಕಿದಂರ್ದ ಹಿಡ್ದ ಇನ್ನ್ ಗದ್ದೆಂದ್ ಹೊರಕು ಅಲ್ಲಿವರೆಗೆ ಕೋಳಿಗಳ ಮುಚ್ಚಿ ಹಾಕೋಕು, ಇಲ್ಲೆ ಗೂಡುಲಿ ಹಾಕೋಕು. ಗದ್ದೆಗೆ ಹೋದರೆ ನಿಮ್ಮ ಕೋಳಿ ಬಾತ್, ಮುಚ್ಚಿ ಹಾಕಿಕೆ ಅದುಲೆ, ಇಂತ ಕಷ್ಟಕೆ ಕೋಳಿ ಸಾಕುದು ಯಾಕೆತ ಜಗಳ ಕಡೆಗೆ ಗುಂಡು ಹೊಡೆದು ಮತ್ತೆ ನಿಷ್ಠುರ ಮಾತ್ ಇಲ್ಲೆ. ಗೂಡ್‌ಳಿ ಎರಡ್ ತಿಂಗ ಹಾಕಿರೆ ಮತ್ತೆ ಕೋಳಿ ಹೇನ್ ಆಗಿ ನೋಡಿಕೆ ಬತ್ತ್. ಮತ್ತೆ ಮನೆಲಿ ಮಲ್ಗಿಕೆ ಸತ ಅಲೆ. ಮತ್ತೆ ತೆಂಗಿನ ಎಣ್ಣೆ ಮೈಗೆ ತಿಕ್ಕಿ ಮಲ್ಗೋಕು ಇನ್ ಕೋಳಿ ಹೇನ್‌ನ ಮಾರಿ ಹೋಕು ತೇಳ್ರೆ ನೆಕ್ಕಿ ಸೊಪ್ಪು ತಂದ್ ಬೆಂಕಿ ಹಾಕಿ, ಹೊಗೆ ಹಾಕಿ ಹೇತುಟು, ಹೂ ಚೆಟ್ಟಿ ಕೇರಿಟು ಮುಚ್ಚಿ ಹಾಕಿ, ಎಲಿಪಾಸನ ಮಡ್ಗಿನೆ, ಮತೆ ನಾಯಿಂದ ಹಿಡ್ಸುದು ಹಿಂಗೆ ಅಲ್ಲಿನು ಜಗಳ ನಿಷ್ಠುರ ಮನೆವುಕೂ ಮನೆವುಕೂ ಮಾತ್ ಇಲ್ಲದೆ ಅದ್ ಉಟ್ಟು. ಕಡಗೆ ಗಂಡನೆ ಹೇಳ್ದ ಹೆಣ್ಣಗೆ ಕೋಳಿ ಸಾಕ್‌ಬಡ ನಿನ್ನ ಕೋಳಿನ ಎಲ್ಲಾ ಕೊಂದನೆತಾ.

ಹಿಂಗೆ ಹಂದಿ ಸಾಕಿರೂ ಕಷ್ಟ ನಿಮ್ಮ ಹಂದಿ ಗದ್ದಗೆ ಬಂದೆ, ತೋಟಕೆ ಬಂದ್ ಕೆಸನ ಗೆಂಡೆ ತಿಂದದೆ ಗೂಡಿಗೆ ಹಾಕಿ ತಾ, ದನ ಸಾಕಿರೂ ಅಷ್ಟೆ ದನಗಳ ಕಟ್ಟಿ ಹಾಕಿ ತೋಟಕೆ ಬಂದ್ ಹೊಡಿ ಮಾಡ್ಡೆ, ಬಾಳೆ ತಿಂದೆತಾ ಹಿಂಗೆ ಎಂತರೂ ಸಾಕಿಕೆ ಕಷ್ಟ ಈ ಊರುಲಿ. ಹಂದಿ, ದನಂದಾಗಿ ಎಷ್ಟೋ ಜಗಳ, ಕೇಸ್ ಕೋರ್ಟು ಅದೆ. ಅದರಂದ ಹಂದಿನೂ ಬೇಡ ಕೋಳಿನೂ ಬ್ಯಾಡತ ಅದೆ.

ಒಂದು ವೇಳೆ ನೀವು ಕೋಳಿ, ಹಂದಿ, ದನ ಸಾಕದೆ ಇದ್ದರೂ ಹೇಳುವೆ ಎಂತಾ ಹೆಂಗ್ಸ್ ಅಪ್ಪಾ ಅದ್! ಒಂದು ನಾಕ್ ಕೋಳಿ ಸಾಕಿಕೆ ಆತ್‌ಲೆ? ಒಂದು ಹಂದಿ ಬುಟ್ಟು ಕಂಡ್ರೆ ದುಡ್ಡು ಅದಲೆ ತಳಿನ ಸುಮ್ಮನೆ ಚೆಲ್ಲುವ ಬದ್‌ಲ್ ಒಂದು ಹಂದಿ ಸಾಕಂಡ್ರೆ ಅತಲಾತಾ. ದನ ಇಲ್ಲದಿದ್ದರೆ ಕೇಳುವೆ ನಿಮಿಗೆ ದನಗ ಇಲ್ಲೆ? ಒಂದು ಹಸ್ ಸಾಕಂಡ್ರೆ ಒಳ್ಳೆದಲ್ಲ ಹಾಲ್ ಸಿಕ್ಕಿದೆ. ಮಜ್ಜಿಗೆ ಮಾಡಿಕಣಕತಾ. ಹಿಂಗೆ ಸಾಕಿರೂ ಕಷ್ಟ, ಸಾಕದಿದ್ದರೂ ಕಷ್ಟ. ಹಿಂಗೆ ನಾವು ಸರ್ಪದ ಬಾಯಿಗೆ ತುತ್ತಾಕಾಗದ್ ತಾ ಇದ್ದರೆ ಈ ಸಮಾಜದ ಬಾಯಿಂದ ದೂರ ಸರಿಯಕೆ ಸಾಧ್ಯ ಇಲ್ಲೆ. ಅದರ್‌ಂದ ನಂಗೆ ಈ ಸೂಕ್ತಿಯೇ ಒಳ್ಳೆದ್‌ತಾ ಅದೆ ಎನ್ ತೇಳ್ರೆ ಸರ್ಪದ ಬಾಯಿಗೆ ತುತ್ತಾದರೂ ಸಮಾಜದ ಬಾಯಿಗೆ ತುತ್ತಾಕಾಗದ್‌ತಾ.

ತಕ್ಕಡ ಬಿ. ಕುಮಾರ್

♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣

# ಸಣ್ಣ ಕಥೆ : ಚಿನ್ನದ ಪಂಜರ

(ಹಿಂದಿನ ಸಂಚಿಕೆಯಿಂದ)

ಶಾಲೆಯಲ್ಲಿ ನಾನು ಆಡುತ್ತಿದ್ದ ಒಂದೇ ಆಟವೆಂದರೆ ಪೂಜೆ ಆಟ ಶಾಲೆಯ ಮೈದಾನದ ಪಕ್ಕದ ಕಾಡುಬದಿಯಲ್ಲಿ ಒಂದು ಕಲ್ಲನ್ನು ನೆಟ್ಟು ಅದಕ್ಕೆ ಒಂದು ಸಣ್ಣ ಚಪ್ಪರವನ್ನು ಹಾಕಿ ಕಲ್ಲಿಗೆ ಕಾಡು ಹೂ ತಂದು ಅಲಂಕರಿಸಿ ಮಧ್ಯಾಹ್ನ ಯಾವಾಗಲೂ ಊಟಕ್ಕೆ ಬಿಟ್ಟ ಸಮಯದಲ್ಲಿ ಪೂಜೆ ಆಟ ಆಡುತ್ತಿದ್ದೊ. ನಾವು ಬುತ್ತಿ ಊಟ ಅಲ್ಲೇ ಮಾಡುತ್ತಿದ್ದೆವು ಊಟ ಮಾಡುವುದಕ್ಕೆ ಮೊದಲು ಕಲ್ಲುದೇವರಿಗೆ ಒಂದು ಎಲೆಯಲ್ಲಿ ಸ್ವಲ್ಪ ತೆಗೆದಿಟ್ಟೊ ಊಟ ಮಾಡುತ್ತಿದ್ದೆವು. ಹೀಗೆ ಆಡುತ್ತಿರುವಾಗ ಒಮ್ಮೆ ಅಲ್ಲೆ ಕಾಡು ಬದಿಯಲ್ಲಿ ನನಗೆ ಐದು (5) ರೂಪಾಯಿಯ ನೋಟೊಂದು ಬಿದ್ದುದು ಸಿಕ್ಕಿತು. ಹಣವನ್ನು ನನ್ನ ಸಹೋದ್ಯೋಗಿಗಳಿಗೆಲ್ಲಾ ತೋರಿಸಿ ಈಗ ಈ ಹಣವನ್ನು ಏನು ಮಾಡುವುದೆಂದು ಕಲ್ಲುದೇವರ ಮುಂದೆ ಕುಳಿತು ಚರ್ಚೆ ಪ್ರಾರಂಭಿಸಿದೆವು. ನಾನು ಸ್ವಲ್ಪ ಯೋಚಿಸಿ ಸ್ವಾಮಿ ಈ ಹಣದಲ್ಲಿ ನಿನಗೆ ಒಂದು ಹಣ್ಣುಕಾಯಿ ಮಾಡಿಸುವೆ ನನ್ನನ್ನು ತಾಯಿ ಬಂದು ಊರಿಗೆ ಕರೆದುಕೊಂಡು ಹೋಗುವಂತೆ ಮಾಡು ಎಂದು ಪ್ರಾರ್ಥಿಸಿಕೊಂಡೆ. ನಂತರ ನನ್ನ ವಿಚಾರವನ್ನು ನನ್ನ ಸಹೋದ್ಯೋಗಿಗಳ ಮುಂದೆ ತಿಳಿಸಿದಾಗ ಎಲ್ಲರೂ ಹಣ್ಣುಕಾಯಿ ಮಾಡಲು ಒಪ್ಪಿದ್ದರು. ನನ್ನ ಜೊತೆಯ ಹುಡುಗರು ನನ್ನನ್ನು ಬೀಳ್ಕೊಡಲು ತಯಾರಿಲ್ಲದ್ದಿದ್ದರೂ. ನಾಳೆ ಹಣ್ಣುಕಾಯಿ ಮಾಡಿದರೆ ತಿನ್ನಲು ಸಿಗಬಹುದಾದ ಕಾಯಿ ಹೋಳಿನ ಬಗ್ಗೆ ಎಲ್ಲರ ಗಮನ ಕೇಂದ್ರೀಕೃತವಾಗಿತ್ತು. ಆ ಕಲ್ಲುದೇವರ ಬಗ್ಗೆ ನನಗಿದ್ದಷ್ಟು ಭಕ್ತಿ ಅಲ್ಲಿ ಇನ್ನಾರಿಗೂ ಇದ್ದಂತಿರಲಿಲ್ಲ. ಆದುದರಿಂದ ಈ ಕಲ್ಲಿಗೆ ಕಾಯಿ ಒಡೆದರೆ ಇವನ ತಾಯಿಯೇನು ಬಂದು ಇವನನ್ನು ಊರಿಗೆ ಕರೆದುಕೊಂಡು ಹೋಗಿ ಬಿಡುವುದಿಲ್ಲ ಎಂದು ಅವರು ತಿಳಿದುಕೊಂಡಿದ್ದಿರಬೇಕು. ಅಂತೂ ಹಣ್ಣುಕಾಯಿ ಮಾಡುವುದು ಮಾತ್ರ ನಿಶ್ಚಯವಾಯಿತು. ಆದರೆ ಒಂದು ಸಮಸ್ಯೆ ಆ ನೋಟು ಒಂದು ತುದಿಯಲ್ಲಿ ಸ್ವಲ್ಪ ಸುಟ್ಟುಹೋಗಿತ್ತು. ಇದನ್ನು ಅಂಗಡಿಯವ ನೋಡಿದರೆ ತೆಗೆದುಕೊಳ್ಳುವುದಿಲ್ಲ. ಸುಟ್ಟ ಭಾಗವನ್ನು ಕಾಣಿಸದಂತೆ ಒಳಭಾಗಕ್ಕೆ ಮಡಚಿ ಹೀಗೆ ಕೊಡು ಎಂದು ನನ್ನ ಸಹೋದ್ಯೋಗಿ ನೋಟನ್ನು ನನಗೆ ಕೊಟ್ಟ. ಅಂದೇ ಹೇರ್ ಕಟ್ ಮಾಡಿಸಿಕೊಂಡು ಬರಲೆಂದು ಕೊಟ್ಟ ಎರಡು ರೂಪಾಯಿ ಬೇರೆ ಜೇಬಲ್ಲಿತ್ತು. ಸರಿ ಇಂದು ಹೇರ್ ಕಟ್ಟ್ ಮಾಡಿಸಿ ಈ ಎರಡು ರೂಪಾಯಿ ಬದಲು ಬಿದ್ದು ಸಿಕ್ಕಿದ್ದ ಐದು ರೂಪಾಯಿಯನ್ನು ಕೊಡುವುದು ಆಗ ಅವನು ಮೂರು ರೂಪಾಯಿ ಬಾಕಿ ಕೊಡುತ್ತಾನೆ ಎಂದು ಪೂರ್ವ ಯೋಜನೆ ಹಾಕಿಕೊಂಡೆ. ಅದರಂತೆ ಶಾಲೆ ಬಿಟ್ಟನಂತರ ಹಜಾಮನಂಗಡಿಗೆ ಹೋಗಿ ಹೇರ್ ಕಟ್ ಮಾಡಿಸಿಕೊಂಡು ಐದು ರೂಪಾಯಿ ಕೊಟ್ಟೆ ಎಲ್ಲಿ ಸುಟ್ಟುಹೋಗಿದ್ದನ್ನು ಕಂಡುಬಿಡುತ್ತಾನೋ ಎಂದು ಹೆದರಿದ್ದೆ ಆದರೆ ಅವನು ನೋಡದ ಹಾಗೆ ಜೇಬಿಗಿಟ್ಟುಕೊಂಡು ಬಾಕಿ ಮೂರು ರೂಪಾಯಿ ಕೊಟ್ಟ. ನಾನು ಹಜಾಮನಂಗಡಿಯಿಂದ ಈಚೆ ಬರುತ್ತಲೆ ಜೇಬಿನಲ್ಲಿದ್ದ ಎರಡು ರೂಪಾಯಿಗೆ ಈ ಮೂರು ರೂಪಾಯಿ ಸೇರಿಸಿ ಐದು ರೂಪಾಯಿ ಒಟ್ಟಿಗೆ ಇಟ್ಟುಕೊಂಡು ಬಸ್‌ಗೆ ಬಂದೆ ಆದರೆ ರಾಮಬಸ್ ನನ್ನನ್ನು ಬಿಟ್ಟು ಹೋಗಿತ್ತು. ಇನ್ನೊಂದು ಬಸ್ ಬರುವುದೆಂದು ಕಾದು ಕುಳಿತೆ ಘಂಟೆ ಏಳಾದರೂ ಬಸ್ ಬರಲಿಲ್ಲ. ಮಾವನ ಪರಿಚಯ ಇದ್ದವನೊಬ್ಬ 7 ಘಂಟೆ ವರೆಗೆ ನನ್ನನ್ನು ಪೇಟೆಯಲ್ಲಿ ಕಂಡು ವಿಚಾರಿಸಿ ಮಾವನಿಗೆ ಫೋನ್ ಮಾಡಿದ ಸ್ವಲ್ಪ ಹೊತ್ತಿನಲ್ಲೆ ಮಾವ ಜೀಪ್ ತಂದು ಕರೆದುಕೊಂಡು ಹೋದರು. ಮನೆಗೆ ತಲುಪುತ್ತಲೆ ಅಜ್ಜಿ ಬಸ್ ಹೋಗಿದ್ದರೆ. ಆಗಲೇ ಫೋನ್ ಮಾಡಬೇಕಿತ್ತು ಇಲ್ಲಾ ನಡೆದುಕೊಂಡು ಬರಬೇಕಾಗಿತ್ತು ಎಂದಳು. ಮಾವ ಅಜ್ಜಿಯನ್ನು ಕುರಿತು ಸಾಕು ಸಾಕು ಸುಮ್ಮನಿರು ಎಂದರು ಆಶ್ಚರ್ಯವೊ ಎಂಬಂತೆ ಅಜ್ಜಿ ಸುಮ್ಮನಾದರೂ ನಾನು ಕಲ್ಲುದೇವರಿಗೆ ಸತ್ಯ ಇದೆ ಆ ಕಲ್ಲುದೇವರೇ ಇಂದು ನನ್ನನ್ನು ಅಜ್ಜಿಯಿಂದ ರಕ್ಷಿಸಿತು ಎಂದುಕೊಂಡೆ.

ಮಾರನೆಯ ದಿನ ಶಾಲೆಗೆ ಹೋದ ಕೂಡಲೆ ನನ್ನ ಜೊತೆಯವರಿಗೆಲ್ಲಾ ನಾನು ಐದು ರೂಪಾಯಿಯನ್ನು ನಡೆಸಿದ ವಿಚಾರ ತಿಳಿಸಿ ಇಂದು ಮಧ್ಯಾಹ್ನ ಊಟಕ್ಕೆ ಬಿಟ್ಟಾಗ ಹಣ್ಣುಕಾಯಿ ಮಾಡುವ ಎಂದೆ ಅಂದು ನಾವೆಲ್ಲರೂ ಮಧ್ಯಾಹ್ನ ಊಟಕ್ಕೆ ಬಿಡುವುದನ್ನೇ ಕಾಯುತ್ತಿದ್ದೆವು ಪಾಠದ ಕಡೆ ಯಾರ ಗಮನವೂ ಇರಲಿಲ್ಲ. ನಾನು ಆಗಾಗ್ಗೆ ಜೇಬಿನಲ್ಲಿದ್ದ ಹಣವನ್ನು ಮುಟ್ಟಿ ಬದ್ರವಾಗಿರುವುದನ್ನು ಕಾತ್ರಿ ಮಾಡಿಕೊಳ್ಳುತ್ತಿದ್ದೆ. ಮಧ್ಯಾಹ್ನ ಊಟಕ್ಕೆ ಬಿಟ್ಟಿದ್ದೆ ಕೆಲವರನ್ನು ಕಲ್ಲುದೇವರ ಸುತ್ತ ಕ್ಲೀನ್ ಮಾಡುವಂತೆ ಹೇಳಿ ನಾನು ಒಂದಿಬ್ಬರನ್ನು ಕರೆದುಕೊಂಡು ಪೇಟೆಗೆ ಹೋಗಿ ಒಂದು ತೆಂಗಿನಕಾಯಿ, ಊದುಬತ್ತಿ, ಸ್ವಲ್ಪ ಕುಂಕುಮ, ಕರ್ಪೂರ ಹೀಗೆ ಪೂಜೆ ಸಾಮಾನು ತೆಗೆದುಕೊಂಡು 30 ಪೈಸೆ ಉಳಿದಿತ್ತು. ಆ 30 ಪೈಸೆಯನ್ನು ದೇವರ ಕಲ್ಲಿನ ಕೆಳಗೆ ಹೂತಿಟ್ಟು ಅದರ ಮೇಲೆ ಕಲ್ಲನ್ನು ನಿಲ್ಲಿಸಿ ಬುತ್ತಿ ಪಾತ್ರೆಯಲ್ಲಿ ನೀರನ್ನು ತಂದು ಅಭಿಷೇಕ ಮಾಡಿ ಕುಂಕುಮ ಹಚ್ಚಿ ಹೂ ಇಟ್ಟು, ಗಂಧದ ಕಡ್ಡಿ ಹಚ್ಚಬೇಕೆಂದರೆ ಬೆಂಕಿ ಪೊಟ್ಟಣ ಇರಲಿಲ್ಲ. ಒಬ್ಬ ಸಹೋದ್ಯೋಗಿ ಗಂಧದ ಕಡ್ಡಿಯನ್ನು ತೆಗೆದುಕೊಂಡು ಹೋಗಿ ಗೂಡಂಗಡಿಯ ಸಿಗರೇಟು ಕತ್ತಿಸಿಕೊಳ್ಳಲು ಹಚ್ಚಿಟ್ಟಿದ್ದ ದೀಪದಲ್ಲಿ ಕತ್ತಿಸಿಕೊಂಡು ಬಂದನು. ನಂತರ ಕಾಯಿ ಒಡೆದರೆ ಕಾಯಿ ಹಾಳಾಗಿತ್ತು ಒಳಗೆಲ್ಲಾ ಗಟ್ಟಿ ಮೊಸರಿನಂತಿತ್ತು. ಇಷ್ಟರವರೆಗೆ ಪೂಜೆಗಾಗಿ ಲಗುಬಗೆಯಿಂದ ಓಡಾಡಿದವರೆಲ್ಲಾ ತುಂಬಾ ಸಿಟ್ಟುಗೊಂಡರು. ಕೆಲವರು ದೇವರ ಮೇಲೆ ಸಿಟ್ಟುಮಾಡಿಕೊಂಡರೆ, ಕೆಲವರು ಹಾಳು ತೆಂಗಿನಕಾಯಿಕೊಟ್ಟ ಅಂಗಡಿಯವನ ಮೇಲೆ ಇನ್ನು ಕೆಲವರು ನನ್ನ ಮೇಲೆ ಸಿಟ್ಟುಗೊಂಡಿದ್ದರು. ಯಾರೂ ಏನು ಮಾತನಾಡದೆ ಒಬ್ಬರ ಮುಖವನ್ನು ಒಬ್ಬರು ನೋಡಿ ಕೊಂಡು. ದುಃಖ ಸಿಟ್ಟು ಎರಡನ್ನೂ ಮುಖದಲ್ಲೇ ವ್ಯಕ್ತಪಡಿಸಿ ಕೊಳ್ಳುತ್ತಿದ್ದೆವು. ಅಷ್ಟರಲ್ಲಿ ಶಾಲೆ ಘಂಟೆ ಬಾರಿಸಿತು ಎಲ್ಲರೂ ಹೋಗಿ ಶಾಲೆ ಸೇರಿಕೊಂಡೆವು.

ಸಂಜೆ ಶಾಲೆ ಮುಗಿಸಿ ರಾಮ ಬಸ್ ಹಿಡಿದು ಮನೆಗೆ ಬಂದೆ ಅಜ್ಜಿ ಕಟ್ಟಿಗೆಯ ತುಂಡು ಹಿಡಿದು ಅಂಗಳದಲ್ಲಿ ನಿಂತಿದ್ದರು. ಅಂದು ಪೇಟೆಗೆ ಬಂದ ಮಾವನವರು ಹಜಾಮನ ಅಂಗಡಿಗೆ ಹೋಗಿದ್ದರಂತೆ. ಅಲ್ಲಿ ಹಜಾಮ ಮಾವನಿಗೆ ಹಿಂದಿನ ದಿನ ನಾನು ಐದು ರೂಪಾಯಿಯ ಸುಟ್ಟ ನೋಟು ಕೊಟ್ಟ ವಿಚಾರ ತಿಳಿಸಿ ಆ ನೋಟು ನಡೆಯುವುದಿಲ್ಲ

ಎಂದು ಹೇಳಿ ಎರಡು ರೂಪಾಯಿ ತೆಗೆದುಕೊಂಡನಂತೆ ಈ ವಿಚಾರವನ್ನು ಮಾವ ಅಜ್ಜಿಗೆ ತಿಳಿಸಿಬಿಟ್ಟಿದ್ದರು. ಮುಂದೆ ಏನು ನಡೆಯಿತೆಂದೇ ತಿಳಿಯಲಿಲ್ಲ. ಹಾಸಿಗೆಯಲ್ಲಿ ಮಲಗಿದ್ದೆ. ಅತ್ತೆ ಕೈಕಾಲಿಗೆಲ್ಲಾ ಔಷಧಿ ಹಚ್ಚುತ್ತಿದ್ದರು. ಈಗ ನನಗೆ ಕಲ್ಲುದೇವರ ಬಗ್ಗೆ ಅತೀವ ಕೋಪ ಬಂದಿತ್ತು. ನಾಳೆ ಆ ಕಲ್ಲುದೇವರಿಗೊಂದು ಗತಿಕಾಣಿಸುತ್ತೇನೆ ಎಂದುಕೊಂಡೆ ಆದರೆ ಮಾರನೆ ದಿನ ನಾನು ಹಾಸಿಗೆಯಿಂದ ಏಳುವ ಸ್ಥಿತಿಯಲ್ಲಿರಲಿಲ್ಲ ಮೈ ತುಂಬಾ ಬಿಸಿಯಾಗಿತ್ತು ಮಾವ ಜೀಪ್‌ನಲ್ಲಿ ಆಸ್ಪತ್ರೆಗೆ ಕರೆದುಕೊಂಡು ಹೋಗಿ ಬಂದರು. ಒಂದು ವಾರವಾದರೂ ಜ್ವರ ಬಿಡಲೇ ಇಲ್ಲ ಜ್ವರದ ಬರದಲ್ಲಿ ಕಲ್ಲುದೇವರಿಗೆ ಸತ್ಯ ಇಲ್ಲ. ಕಲ್ಲು ದೇವರಿಗೆ ಸತ್ಯ ಇಲ್ಲ ಎನ್ನುತ್ತಿದ್ದೆನಂತೆ. ಅವ್ವ ಹುಡುಗನಿಗೆ ಏನೋ ಸೋಕಿಕೊಂಡಿದೆ ಎಂದು ಯಾರನ್ನೊ ಕರೆಸಿ ಅದೇನೋ ಕಣ್ಣುಕತ್ತಲೆ ತೆಗೆಯುವುದಂತೆ ಸೊಂಕಿಗೆ ಮದ್ದಂತೆ ಏನೆಲ್ಲಾ ಮಾಡಿಸಿದರು ಮಾವನಿಗೆ ಮಾತ್ರ ಇದಾವುದರಲ್ಲೂ ನಂಬಿಕೆ ಇಲ್ಲ ನಿತ್ಯ ಆಸ್ಪತ್ರೆಗೆ ಕರೆದುಕೊಂಡು ಹೋಗಿ ಬರುತ್ತಿದ್ದರು. ಈ ಮಧ್ಯೆ ಮಾವನವರು ಶಾಲೆಗೆ ಹೋಗಿ ಅಲ್ಲಿ ನನ್ನ ಕ್ಲಾಸ್ ಟೀಚರ್ ಅನ್ನು ಮತ್ತು ನನ್ನ ಸಹೋದ್ಯೋಗಿಗಳನ್ನು ವಿಚಾರಿಸಲಾಗಿ ಕಲ್ಲುದೇವರು, ಹಣ್ಣುಕಾಯಿ ಮಾಡಿಸಿದ್ದು ಮತ್ತೆ ನನ್ನ ಹರಕೆ ವಿಚಾರ ಎಲ್ಲಾ ಬಯಲಾಯಿತು ಕೂಡಲೆ ಮಾವ ಊರಿಗೆ ಹೋಗಿ ತಾಯಿ, ತಂದೆ ಮತ್ತು ಚಿಕ್ಕಪ್ಪ ಎಲ್ಲರನ್ನೂ ಕರೆದುಕೊಂಡು ಬಂದರು. ಬಂದವರಲ್ಲಿ ಚಿಕ್ಕಪ್ಪ ಮಾರನೆಯ ದಿನ ಹೊರಟುಹೋದರು. ತಾಯಿ ಮತ್ತು ತಂದೆ ನನ್ನ ಪಕ್ಕ ಹಾಸಿಗೆಯಲ್ಲಿ ಕುಳಿತುಕೊಂಡು ನೀನು ಬೇಗ ಚೆನ್ನಾಗಿ ಆಗು ಇನ್ನೂ ನಿನ್ನನ್ನು ಇಲ್ಲಿ ಬಿಟ್ಟು ಹೋಗುವುದಿಲ್ಲ. ಆರೋಗ್ಯ ಸುಧಾರಿಸಿದ ಕೂಡಲೆ ಮನೆಗೆ ಕರೆದುಕೊಂಡು ಹೋಗುತ್ತೇವೆ ನಿನ್ನನ್ನು ಅಲ್ಲೇ ಶಾಲೆಗೆ ಸೇರಿಸುತ್ತೇವೆ ಎಂದರು. ಅಲ್ಲಿವರೆಗೆ ಸುಮಾರು 10 ದಿನಗಳಿಂದ ಯಾವುದೇ ಔಷದಿಗೂ ಬಗ್ಗದ ನನ್ನ ಜ್ವರ ಕಡಿಮೆಯಾಗುತ್ತಾ ಬಂದು ಮತ್ತೆ ಎರಡು ದಿನದಲ್ಲೇ ನಾನು ಪೂರ್ತಿಯಾಗಿ ಗುಣಮುಖನಾಗಿದ್ದೆ. ಅಜ್ಜಿ ನನ್ನ ಬಟ್ಟೆಯನ್ನೆಲ್ಲಾ ಜೋಡಿಸಿ ಒಂದು ಚೀಲದಲ್ಲಿ ತುಂಬಿ ತಂದಿಟ್ಟರು. ನಾನು ಹಾಸಿಗೆ ಹಿಡಿದಲ್ಲಿಂದ ಅಜ್ಜಿ ಸರಿಯಾಗಿ ಊಟ ಮಾಡುತ್ತಿರಲಿಲ್ಲ. ಈಗ ಹತ್ತುದಿನದಿಂದ ಅಜ್ಜಿ ತುಂಬಾ ಇಳಿದು ಹೋಗಿದ್ದರು. ಒಬ್ಬರೇ ಕುಳಿತು ಅಳುತ್ತಿದ್ದರು. ನಾನು ಗುಣಮುಖನಾಗಿ ಹಾಸಿಗೆ ಬಿಡುವಷ್ಟರಲ್ಲಿ ಅಜ್ಜಿ ಹಾಸಿಗೆ ಹಿಡಿದಿದ್ದಳು. ಮಾವ ಶಾಲೆಯಿಂದ ನನ್ನ ವರ್ಗಾವಣೆ ಪತ್ರ ತಂದಿದ್ದರು. ನಾನು ತಾಯಿಯೊಂದಿಗೆ ಊರಿಗೆ ಹೊರಟುನಿಂತೆ. ಅಜ್ಜಿಗೆ ಹಾಸಿಗೆ ಬಿಟ್ಟು ಏಳಲು ಸಾಧ್ಯವಾಗುತ್ತಿರಲಿಲ್ಲ. ಅಜ್ಜಿಯ ಬಳಿಗೆ ಹೋದಾಗ ಅಜ್ಜಿ ತಬ್ಬಿಕೊಂಡು ನನ್ನನ್ನು ಬಿಟ್ಟು ಹೋಗಬೇಡ ಎಂದು ಅಳಲು ಪ್ರಾರಂಭಿಸಿದರು. ನನಗೇಕೊ ಈಗ ಅಜ್ಜಿಯ ಬಗ್ಗೆ ಪಾಪ ಎನಿಸುತ್ತಿತ್ತು. ಅಜ್ಜಿಯ ಬಂದನದಿಂದ ಬಿಡಿಸಿಕೊಂಡು ಪಂಜರದಿಂದ ಬಿಟ್ಟ ಪಕ್ಷಿಯಂತೆ ಮಾವನ ಮನೆಯನ್ನು ಬಿಟ್ಟು ತಂದೆ ತಾಯಿಯೊಂದಿಗೆ ಊರಿನ ಕಡೆ ಹಾರಿದೆ.

ಲೇಖನ : ಕುಂಭಗೌಡನ ರಂಜಿತ್

♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣

## ಮರಗೋಡುವಿನಲ್ಲಿ ವಿಜೃಂಭಿಸಿದ ಕೈಲ್ ಪೋಳ್ದ್ ಹಬ್ಬ

ದಿನಾಂಕ 3-9-1999ರಂದು ವಿವೇಕಾನಂದ ಯುವಕ ಸಂಘ ವತಿಯಿಂದ ಮರಗೋಡು ಪ್ರಾಥಮಿಕ ಶಾಲಾ ಮೈದಾನದಲ್ಲಿ ಗ್ರಾಮಾಂತರ ಆಟೋಟಗಳ ಸ್ಪರ್ಧೆ ನಡೆಯಿತು. ಆಟೋಟಗಳ ಉದ್ಘಾಟನೆಯನ್ನು ಶ್ರೀ ಮಂಡೇಪಂಡ ಮುತ್ತಪ್ಪ, ಅಧ್ಯಕ್ಷರು, ಶ್ರೀ ಗಣಪತಿ ದೇವಸ್ಥಾನ ಸಮಿತಿ ಇವರು ಮಾಡಿದರು. ಮುಖ್ಯ ಅತಿಥಿಗಳಾಗಿ ಶ್ರೀ ಕೆ. ಎಂ. ಅರುಣ ಕುಮಾರ್, ಅಧ್ಯಕ್ಷರು, ದವಸ ಭಂಡಾರ, ಮರಗೋಡು ಇವರು ಆಗಮಿಸಿದ್ದರೆ, ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ ಪಿ. ಆರ್. ಬಾಲಕೃಷ್ಣ, ಅಧ್ಯಕ್ಷರು, ಗ್ರಾಮ ಪಂಚಾಯಿತಿ, ಮರಗೋಡು ಇವರು ವಹಿಸಿದ್ದರು. ಆಟೋಟಗಳ ಸ್ಪರ್ಧೆಯಲ್ಲಿ ಮಕ್ಕಳಿಂದ ಹಿಡಿದು ಹಿರಿಯರು, ಮುದುಕರು, ಮಹಿಳೆಯರು ಭಾಗವಹಿಸಿದ್ದರು. ಸ್ಪರ್ಧಾ ಕಾರ್ಯಕ್ರಮದಲ್ಲಿ ಒಟ್ಟು 31 ಸ್ಪರ್ಧೆ ಇಡಲಾಗಿತ್ತು. ವಿಶೇಷವೆಂದರೆ ಪುರುಷರ ಮತ್ತು ಮಹಿಳೆಯರ ಹಗ್ಗ ಜಗ್ಗಾಟ, ತೊಡಕಿನ ಓಟ ಪ್ರೇಕ್ಷಕರ ಮನಸೆಳೆದವು. ಸಮಾರೋಪ ಸಮಾರಂಭದ ಅಧ್ಯಕ್ಷತೆಯಲ್ಲಿ ಶ್ರೀ ಕಾನಡ್ಕ ಅಪ್ಪಾಜಿ, ನಿವೃತ್ತ ಸಹಾಯಕ ಕೃಷಿ ಉಪನಿರ್ದೇಶಕರು ವಹಿಸಿದ್ದರು. ಅತಿಥಿಗಳಾಗಿ ಶ್ರೀ ಡಿ. ಎ. ನಾಣಯ್ಯ, ಸಹಶಿಕ್ಷಕರು, ಭಾರತೀ ಪ್ರೌಢಶಾಲೆ ಮರಗೋಡು ಆಗಮಿಸಿದ್ದರು. ಈ ಸಮಾರಂಭದಲ್ಲಿ ಶ್ರೀಮತಿ ಕೆ. ಎಸ್. ಪಾರ್ವತಿಯವರು ಮತ್ತು ಶ್ರೀಮತಿ ಸಿ. ಎಸ್. ಪೂವಮ್ಮನವರನ್ನು ಜಿಲ್ಲಾ ಪ್ರಶಸ್ತಿ ವಿಜೇತರಾದುದಕ್ಕಾಗಿ ಅವರನ್ನು ಶಾಲು ಹೊದಿಸಿ ಸನ್ಮಾನಿಸಲಾಯಿತು. ಶ್ರೀ ತೋಟಂಬೈಲು ರಾಘವೇಂದ್ರ, ಅಧ್ಯಕ್ಷರು, ಮರಗೋಡು ಸಹಕಾರ ಬ್ಯಾಂಕ್ ಇವರು ಆಗಮಿಸಿ ಕ್ರೀಡಾಪಟುಗಳಿಗೆ ಶುಭ ಹಾರೈಸಿದರು. ಕೊನೆಯದಾಗಿ ವಿವೇಕಾನಂದ ಯುವಕ ಸಂಘದ ಅಧ್ಯಕ್ಷರಾದ ಎಂ. ಕೆ. ವೆಂಕಟೇಶ್‌ರವರ ವಂದನಾರ್ಪಣೆಯೊಂದಿಗೆ ಕಾರ್ಯಕ್ರಮ ಮುಕ್ತಾಯಗೊಂಡಿತು.

ವರದಿ : ಪರಿಚನ ಪ್ರದೀಪ್, ಮರಗೋಡು.

♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣

## ಉಳ್ಸಿ – ಬೆಳ್ಸಿ

ಪ - ತ್ರಿಕಾ ರಂಗಲೀ ಆಸಕ್ತಿ ವಹಿಸಿ ಧಿ
ಟ್ಟ - ಧೀರನಂಗೆ ಮುಂದೆ ಬಂದ್ ಗಾ
ದ - ಬಾಂಧವರ ಸಂಸ್ಕೃತಿನ ಎಲ್ಲಾವುಕ್ಕೂ
ಪ್ರ - ಚಾರ ಪಡ್ಸಿ ಜನಾಂಗದ ಏಳಿಗೆಗೆ, ಅರೆ
ಭಾ - ಷೆನ ಉಳ್ಸಿ ಬೆಳ್ಸಿ ಮುಂದೆ ತರಕ್ಕೊತೇಳಿ
ಕ - ಷ್ಟ ಪಟ್ಟ್ ಕೊಡಗು ಸಂಗಾತಿ ಪತ್ರಿಕೆನಾ ಹೊ
ರ - ತಂದ್ ಎಲ್ಲಾರ ಮನೆ ಮಾತಾಗಿರುವ ಗೌರವ ಸಂಪಾದಕ

ಅಣ್ಣೆಚ್ಚೀರಾ ಭಾರತಿ ಸೋಮಣ್ಣ, ಮಕ್ಕಂದೂರು ಗ್ರಾಮ

♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣

# ಗೌಡರು ಯಾರು : ಎಲ್ಲಿಂದ? ಎಲ್ಲಿಗೆ?

**೨. ದೇವತಾರಾಧನೆ** (ಹಿಂದಿನ ಸಂಚಿಕೆಯಿಂದ)

ವೆಂಕಟರಮಣ ಸ್ವಾಮಿ ಕುಲದೇವರಾದರೂ ಸುಬ್ಬಮ್ಮ ದೇವರಿಗೆ ಮದುವೆಗಳಲ್ಲಿ ಹರಕೆ ಹಣ ಕಟ್ಟುವುದು ಮದುವೆಗಳಲ್ಲಿ ಗಂಗಪೂಜೆ ಮಾಡುವುದು, ಕಾಳಿ, ಚಾಮುಂಡಿ ವಿಷ್ಣುಮೂರ್ತಿ ಮುಂತಾದ ಮೂರ್ತಿ ಪೂಜೆಯೂ ಈ ಗೌಡರಲ್ಲಿ ಹಿಂದಿನಿಂದಲೂ ನಡೆದುಕೊಂಡು ಬಂದುದರ ಹಿನ್ನೆಲೆಯನ್ನು ಸ್ವಲ್ಪ ವಿಚಾರಿಸಬೇಕಾಗಿದೆ.

ಮಹಾಮಾತಾ (Mother Goddess) ಸಂಪ್ರದಾಯವು ಪುರಾತನ ಜನಾಂಗದ ಮೂಲದೈವತ. ಭಾರತದಲ್ಲಿ ಮಾತ್ರವಲ್ಲ ಭಾರತದ ಹೊರಗೂ ಆದಿ ಜನನಿಯ ಆರಾಧನೆ ಇದ್ದಿತು. ಇದಕ್ಕೆ ಕಾರಣ ಮಾನವ ಸಮಾಜವು ಮಾತೃಪ್ರಧಾನ ಕುಟುಂಬ ಸಂಸ್ಥೆಯ ಹಂತದಲ್ಲಿ ಕಂಡುಬರುವುದೇ ಕಾರಣ. ಇದು ಸಿಂಧೂನದಿ ದಂಡೆಯ ಮೇಲಿರುವ ಹರಪ್ಪಾ ಮತ್ತು ಮೊಹೆಂಜದಾರೋ ಸಂಸ್ಕೃತಿಯಲ್ಲಿರುವುದನ್ನು ಚರಿತ್ರಕಾರರು ಒಪ್ಪುತ್ತಾರೆ. ಈಗಲೂ ಮಹಾಮಾತೆಯನ್ನು ಪೂಜಿಸುವ ಸಂಪ್ರದಾಯ ನಮ್ಮಲ್ಲಿದೆ. ಆದುದರಿಂದಲೇ ನಾವು ಸುಬ್ಬಮ್ಮ ದೇವರಿಗೆ ಮದುವೆಗಳಲ್ಲಿ ಹರಕೆ ಹಣ ಕಟ್ಟುವುದು. ಸುಬ್ಬಮ್ಮ ಎಂದರೆ ಸರ್ಪಾಂಬೆ ಅಥವಾ ಮಹಾಮಾತೆ ಎಂದರ್ಥ. ಇದೂ ಅಲ್ಲದೆ ಕಾಲವನ್ನು ದೇವರೆಂದು ಇದರ ಭಿನ್ನ ಉಚ್ಚಾರಣೆಗಳು ಆಗಿರುವ ಶಕ್ಯತೆ ಇವೆ. ಮಲ್ಲಯ್ಯ ಮಲ್ಲವ್ವ, ಕಲ್ಲಪ್ಪ, ಕಲ್ಲವ್ವ, ಕಾಳಪ್ಪ, ಕಾಳಮ್ಮ ಹೀಗೆ ಕಾಲ (ದೇವ) ಕಾಲಿ (ದೇವಿ) ಆಗಿರುವುದು ಕಾಣುತ್ತದೆ. ಗೋವಳರಿಗೆ ಸಂಬಂಧಿಸಿದ ದೇವರು ಕಲ್ಲೇಶ್ವರ. ಹಾಲಿನ ದೇವರು, ಹಾಲಿನಲ್ಲಿ ಹುಟ್ಟಿದ ದೇವರು. ಕಲ್ಲೇಶ್ವರ ದೇವತಾ ಕಲ್ಪನೆಯು ವೇದಪೂರ್ವ ಕಾಲವೆಂದು ಹೇಳುವುದಕ್ಕೆ ಅಡ್ಡಿ ಇಲ್ಲವೆನ್ನಬಹುದು. ಹಾಲಿನೊಡನೆ ನಿಕಟ ಸಂಬಂಧವಿರುವ ವೃಷಭ. ವೃಷಭ ಈಶ್ವರನ ವಾಹನ. ಶಿವನು ಕಲ್ಲೇಶ್ವರ. ಹಾಲಿನ ದೇವರು ಹಾಲಿನಲ್ಲಿ ಹುಟ್ಟಿದ ದೇವರು. ಈರ್-ನೀರ್-ಆಲ್-ಪಾಲ್ ಇವು ಅಲ್ಲ-ಕಲ್ಲ ದೇವತೆಯ ಮೂಲಸ್ವರೂಪ ದರ್ಶನ ಮಾಡಿಸುವ ಪದಗಳು. ವೀರಪ್ಪ, ವೀರಭದ್ರಪ್ಪ, ಈರಪ್ಪ ಹೆಸರುಗಳು. ಗಿರಿರಾಜನ ಮಗಳು ಗಿರಿದೇವಿ ಆಗಬೇಕು. ಆದುದರಿಂದ ಗಿರಿಯಪ್ಪ, ಗಿರಿಯಮ್ಮ, ಶಿವನು ಗೋವಳರ ದೇವತೆ. ಗೋರಸವೇ ಹಾಲು ಹಾಲಿಗೆ ಸಂಬಂಧಿಸಿದವರು ಇವರು ಕುರುಬರೂ ಇರಬಹುದು. ದನಕಾರರೂ ಇರಬಹುದು. ಏನೇ ಆದರೂ ಹಾಲಿನ ಸಂಬಂಧವುಳ್ಳವರು. ಶೈವ ಸಂಸ್ಕೃತಿಯು ಆರ್ಯರಲ್ಲದ ದ್ರಾವಿಡ ಸಂಪ್ರದಾಯ. ಇವರು ಮೂರ್ತಿ ಪೂಜಕರೆಂದು ತಿಳಿದುಬರುತ್ತದೆ. ಹೀಗಿರುವಾಗ ಗೌಡರು ಬಹು ಪೂರ್ವಕಾಲದಲ್ಲಿ ಶಿವಪೂಜಕರೇ ಆಗಿರಬೇಕು. ಅದಕ್ಕೆ ಅವರ ಮದುವೆಗಳಲ್ಲಿರುವ ಗಂಗೆ ಪೂಜೆಯೇ ಉದಾಹರಣೆ.

ಶ್ರೀ ರಾಮಾನುಜಾಚಾರ್ಯರ ಕಾಲದಿಂದ ಈಚೆಗೆ 1300 ರಿಂದ 1550 ರವರೆಗೆ ವೈಷ್ಣವ ಧರ್ಮಕ್ಕೆ ಹೆಚ್ಚಿನ ಪ್ರೋತ್ಸಾಹವಿತ್ತು. ವಿಜಯನಗರದ ಅರಸರು ವೈಷ್ಣವ ಮತಾವಲಂಬಿಗಳು.

ಕೃಷ್ಣದೇವರಾಯನಿಗೆ ತನ್ನ ಕುಲದೇವರಾದ ತಿರುಪತಿ ವೆಂಕಟೇಶ್ವರ ಸ್ವಾಮಿಯಲ್ಲಿ ಅಪಾರ ಭಕ್ತಿ ಹಾಗೂ ಪ್ರೀತಿ. ಆದುದರಿಂದ ದೇವಸ್ಥಾನದ ಮುಂದೆ ತನ್ನ ಮತ್ತು ತನ್ನಿಬ್ಬರು ರಾಣಿಯರು, ತಿರುಮಲೆ ದೇವಿ ಮತ್ತು ಚಿನ್ನಾದೇವಿಯರ ತಾಮ್ರದ ಪ್ರತಿಮೆಗಳನ್ನು ಕೆತ್ತಿಸಿದ್ದಾನೆ. ಅದಲ್ಲದೆ ಯಥೇಚ್ಛವಾಗಿ ದಾನ ಧರ್ಮಗಳನ್ನು ಮಾಡಿದ್ದಾನೆ. ಆದುದರಿಂದ ಶಿವಪೂಜೆ ಮಾಡುತ್ತಿದ್ದ ಗೌಡರೂ ಸಹ 1300 ರಿಂದ 1500ರೊಳಗೆ ವೈಷ್ಣವ ಮತಾವಲಂಭಿಗಳಾಗಿ ಇವರ ಕುಲದೇವತೆಯೂ ಶ್ರೀ ವೆಂಕಟ ರಮಣನಾಗಿರುವುದಕ್ಕೆ ಕಾರಣವಾಗಿರಬೇಕು. ವಿಜಯನಗರ ಪತನವಾದ ನಂತರ ಇವರು ಪಶ್ಚಿಮದ ಕಡೆಗೆ ಬಂದಾಗ ಇಕ್ಕೇರಿ ವಂಶದ ರಾಜರ ಆಶ್ರಯವನ್ನು ಪಡೆದು ಐಗೂರು ಬಳಿ ಇರುವ ಊರುಗಳಲ್ಲಿ ನೆಲಸಿದಾಗ ಶೃಂಗೇರಿ ಜಗದ್ಗುರು ಶ್ರೀ ಶಂಕರಾಚಾರ್ಯರ ಉಪದೇಶದಂತೆ "ಸುಬ್ಬಮ್ಮ" ದೇವರ ಪೂಜೆ ಮಾಡುವಂತೆ ಉಪದೇಶ ಮಾಡಿರಬೇಕು. ಹಾಗೆ ಉಪದೇಶ ಮಾಡಿದುದರಿಂದ ಮದುವೆಗಳಲ್ಲಿ "ಸುಬ್ಬಮ್ಮ" ದೇವರಿಗೆ ಹರಿಕೆ ಹಣ ಕಟ್ಟುವ ಪದ್ಧತಿ ಬಂದಿದೆ. ನಂತರ ದಕ್ಷಿಣ ಕನ್ನಡ ಜಿಲ್ಲೆಗೆ ಬಂದಾಗ ಅಲ್ಲಿನ ಕೆಲವು ದೇವತೆಗಳಾದ ಧರ್ಮದ ದೈವ, ವಿಷ್ಣುಮೂರ್ತಿ ಮುಂತಾದ ದೇವತೆಗಳನ್ನೂ ಕೊಡಗಿನಲ್ಲಿ ಅಲ್ಲಲ್ಲಿ ಇರುವ ಗ್ರಾಮದೇವತೆಗಳ ಆರಾಧನೆಯನ್ನೂ ಮಾಡತೊಡಗಿದರು. ಆದರೆ ಇಂದಿಗೂ ಇವರ ಕುಲದೈವ ಶ್ರೀ ವೆಂಕಟರಮಣ ಸ್ವಾಮಿಯ ಮುಡುಪನ್ನು ಇಟ್ಟು ವರ್ಷಕ್ಕೊಂದಾವರ್ತಿಯಾಗಲೀ ಎರಡು ವರ್ಷಕ್ಕೊಂದಾವರ್ತಿಯಾಗಲೀ ಹರಿಸೇವೆಯನ್ನು ಮಾಡುತ್ತಾರೆ. ಹೀಗೆ ಗೌಡರ ಸಂಸ್ಕೃತಿಯು ಒಂದೇ ಸ್ಥಳದ ಸಂಸ್ಕೃತಿಯಾಗಿರದೆ ಹಲವಾರು ಸ್ಥಳದ ಸಂಸ್ಕೃತಿಯ ಮಿಲನದ ಫಲವಾಗಿದೆ ಎಂದು ಹೇಳಬಹುದು.

ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲೆಯ "ಗೌಡರು" 1910 ರಿಂದ 1913ರವರೆಗೆ ಅನೇಕ ಸ್ಥಳಗಳಲ್ಲಿ ಸಭೆ ಸೇರಿ ನಿರೂಪಿಸುವ ಕಟ್ಟಳೆ ನಿರೂಪದ ಪ್ರಕಾರ "ಹಾಲು ಒಕ್ಕಲು ಮಕ್ಕಳು ಯಾನೆ" (ಗೌಡರು) ನಿರೂಪ ಎಂಬುದಾಗಿ ಬರೆದಿದೆ. ಅಲ್ಲದೆ ಹಿಂದಿನ ಮದ್ರಾಸು ರಾಜ್ಯದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯು ಸೇರಿದ್ದುದರಿಂದ ಇಲ್ಲಿನ ಗೌಡರನ್ನು "ಯಾದವ" ಜಾತಿಯ ಗುಂಪಿಗೆ ಸೇರಿಸಿ ಇವರು ಹಾಲು ಒಕ್ಕಲು ಮಕ್ಕಳು ಎಂಬುದಾಗಿ ನಮೂದಿಸಿದುದು ಸೂಕ್ತ ಹೆಸರೆಂದು ದೃಢವಾಗುತ್ತದೆ.

ಮಹಮ್ಮದೀಯರ ಧಾಳಿಯನ್ನು ತಾಳಲಾರದೆ ಆಗಿನ ಕಾಲದಲ್ಲಿ ವಿಜಯನಗರದ ಅರಸರ ಆತ್ಮ ಸ್ನೇಹಿತರೂ ಹಾಗೂ ಮಾಂಡಲೀಕರೂ, ಬಲಾಢ್ಯರೂ ಆಗಿದ್ದ ಇಕ್ಕೇರಿ ವಂಶದ ನಾಯಕರು ಶಿವಮೊಗ್ಗ ಹಾಗೂ ಉತ್ತರ ಕನ್ನಡ ಜಿಲ್ಲೆಗಳನ್ನು ಆಳುತ್ತಿದ್ದುದರಿಂದ ಅವರ ಆಶ್ರಯವನ್ನು ಈ ಹಾಲು ಒಕ್ಕಲು ಮಕ್ಕಳು (ಗೌಡರು) ಪಡೆಯುವಂತಾಗಿ ಉತ್ತರ ಕನ್ನಡ ಜಿಲ್ಲೆಯಲ್ಲಿ ನೆಲೆಸಿದ ಕಾರಣ ಈ ಗೌಡರು "ಅರೆಭಾಷೆ" (ಹಳೆಗನ್ನಡದ ಗ್ರಾಮ್ಯ ಭಾಷೆ) ಯನ್ನು ಆಡಲು ಪ್ರಾರಂಭಿಸಿದರೆಂದು ಹೇಳಬಹುದು. ಕಾರಣವೇನೆಂದರೆ ಉತ್ತರ ಕನ್ನಡ ಜಿಲ್ಲೆಯಲ್ಲಿ ಹೆಚ್ಚಾಗಿ ವಾಸಿಸುತ್ತಿರುವ ಹವ್ಯಕ ಬ್ರಾಹ್ಮಣರು ಆಡುವ ಭಾಷೆಗೂ, ಗೌಡರು ಆಡುವ ಭಾಷೆಗೂ ಹೆಚ್ಚು ವ್ಯತ್ಯಾಸ ಕಾಣುವುದಿಲ್ಲ. ಅಲ್ಲದೇ ಉತ್ತರ ಕನ್ನಡ ಜಿಲ್ಲೆಯಲ್ಲಿರುವ ಹಾಲಕ್ಕಿ ಒಕ್ಕಲ್, ಕುಂಬಾರರು, ಕುರುಬರು ಇನ್ನೂ ಹಲವಾರು ಪಂಗಡದವರೂ ಇದೇ ಭಾಷೆಯನ್ನೇ ಆಡುತ್ತಾರೆ. ಹಾಲಕ್ಕಿ ಒಕ್ಕಲಿಗರ ಹಾಗೂ ಗೌಡರ ಪದ್ಧತಿಗಳು ಹಲವು ವಿಧದಲ್ಲಿ ಸಾಮ್ಯವಾಗಿರುವುದು ಕಂಡುಬರುತ್ತದೆ.

ಇವರು ಉತ್ತರ ಕನ್ನಡ [illegible] ಗೆ ಬಂದ ಸ್ವಲ್ಪ ಸಮಯದಲ್ಲಿ ಇವರನ್ನು ಇಕ್ಕೇರಿ ನಾಯಕರ ರಾಜ್ಯದ ಅಂಗವಾ[illegible]

ಹಾಸನ ಜಿಲ್ಲೆಯ ಐಗೂರು ಸೀಮೆಗೆ ಕಳುಹಿಸಲ್ಪಟ್ಟ ಸ್ವಲ್ಪ ಸಮಯದಲ್ಲಿ ಇಕ್ಕೇರಿ ನಾಯಕರ ಅಧೀನದಲ್ಲಿದ್ದ ಮಲೆನಾಡು ಪ್ರದೇಶಗಳಾದ ಬೆಳ್ತಂಗಡಿ, ಸುಬ್ರಹ್ಮಣ್ಯ, ಸುಳ್ಯ, ಪುತ್ತೂರು, ಬೆಳ್ಳಾರೆ, ವಿಟ್ಲ ಪ್ರದೇಶಗಳಲ್ಲಿ ವ್ಯವಸಾಯ ಮಾಡುವುದಕ್ಕಾಗಿ ಸ್ಥಳ ಪಲ್ಲಟನೆಗೊಳಿಸಲಾಯಿತು.

1663ರಲ್ಲಿ ಇಕ್ಕೇರಿ ನಾಯಕರು ಮೇಲೆ ಕಾಣಿಸಿದ ಪ್ರದೇಶಗಳಲ್ಲಿ ಸುಳ್ಯ ಪ್ರಾಂತ್ಯವನ್ನು ಕೊಡಗು ರಾಜರಿಗೆ ಹಾಲುಬೆಣ್ಣೆಗಾಗಿ ದಾನವಾಗಿ ಕೊಟ್ಟರು. ಅಮೃತ ಎಂದರೆ ಹಾಲು. ಹಾಲು ಉತ್ಪಾದಿಸುವ ಸುಳ್ಯ ಅಮೃತ ಸುಳ್ಯ. ಅಮರ ಸುಳ್ಯವಾಯಿತೆಂದು ಅಭಿಪ್ರಾಯ ಪಟ್ಟಿರುತ್ತಾರೆ. ಆದುದರಿಂದ ಸುಳ್ಯಕ್ಕೆ ಅಮೃತಸುಳ್ಯವೆಂದು ಹೆಸರಾಗಿ ಅಮರ ಸುಳ್ಯವೆಂದಾಯಿತು. ಉಳಿದ ಭಾಗಗಳನ್ನು 1663 ರಿಂದ 1783ರವರೆಗೆ ಇಕ್ಕೇರಿ ನಾಯಕರಿಂದ ಕೊಡಗು ರಾಜರಾದ ಲಿಂಗರಾಜ, ಮುದ್ದುರಾಜರುಗಳು ಕ್ರಯಕ್ಕೆ ಪಡೆದುಕೊಂಡಿದ್ದರಿಂದ ದ. ಕ. ಜಿಲ್ಲೆಯಲ್ಲಿ ಈಗ "ಗೌಡರು" ವಾಸವಾಗಿರುವ ಹೆಚ್ಚು ಕಡಿಮೆ ಎಲ್ಲಾ ಪ್ರದೇಶಗಳು ಕೊಡಗು ಸಂಸ್ಥಾನಕ್ಕೆ ಸೇರಿದ್ದು. 1834ರಲ್ಲಿ ಬ್ರಿಟೀಷರು ಕೊಡಗನ್ನು ವಶಪಡಿಸಿದ ನಂತರ ಈಗಿನ ಸುಳ್ಯದ ಅತ್ತ ಕಡೆಯ ಪ್ರದೇಶವನ್ನು ವಿಂಗಡಿಸಿ ದಕ್ಷಿಣ ಕನ್ನಡ ಜಿಲ್ಲೆ ಎಂಬುದಾಗಿ ಕರೆದರು.

ಕೊಡಗನ್ನು ಟಿಪ್ಪು ಸುಲ್ತಾನನು ವಶಪಡಿಸಿಕೊಂಡು 80,000 ಕೊಡಗರನ್ನು ಶ್ರೀರಂಗಪಟ್ಟಣಕ್ಕೆ ಕರೆದೊಯ್ದು ಮುಸಲ್ಮಾನರನ್ನಾಗಿ ಮಾಡಿದುದರಿಂದ ಮಡಿಕೇರಿ ನಾಡು (ಕಗ್ಗೋಡುನಾಡು) ಹುದಿಕೇರಿ ನಾಡು, ಹೊರ ಮಲೆನಾಡು, ಬೇಂಗು ನಾಡು, ತಾವು ನಾಡು, ಕಡಿಯತ್ ನಾಡು, ನಾಲ್ಕು ನಾಡು, ಕುಯ್ಯಂಗೇರಿ ನಾಡುಗಳಲ್ಲಿ ಭೂ - ವ್ಯವಸಾಯ ಮಾಡಲು ಯಾರೂ ಇಲ್ಲದ್ದರಿಂದ ಈಗಿನ ದ. ಕ. ಜಿಲ್ಲೆಯ ಮೇಲೆ ಕಾಣಿಸಿದ ಪ್ರದೇಶಗಳಿಂದ ಒಂದೊಂದು ಗ್ರಾಮಕ್ಕೆ 15 ಜನರಂತೆ 1799ರಲ್ಲಿ ದೊಡ್ಡವೀರ ರಾಜೇಂದ್ರ ಒಡೆಯರು ಕರೆತಂದು ಮೇಲೆ ಕಾಣಿಸಿದ ನಾಡುಗಳಲ್ಲಿ ನೆಲೆಸುವಂತೆ ಮಾಡಿದರು. ಈ ರೀತಿ ನೆಲೆಸಿದವರಲ್ಲಿ ಗೌಡರದೇ ಅತಿ ಹೆಚ್ಚಿನ ಸಂಖ್ಯೆ. ಅನಂತರ ಇವರಿಗೆ ದೊಡ್ಡ ವೀರರಾಜೇಂದ್ರರೂ ಹಾಗೂ ಲಿಂಗರಾಜೇಂದ್ರರೂ ಜಮ್ಮ ಕೊಟ್ಟರು.

ತನ್ಮಧ್ಯೆ ಹಿಂದೆ ದನಗಳನ್ನು ಸಾಕಿ ಹಾಲು ಉತ್ಪಾದನೆಗೆ ತೊಡಗಿದ್ದ ಈ ಹಾಲು ಒಕ್ಕಲು ಮಕ್ಕಳು ಬೇರೆ ಸ್ಥಳಗಳಿಗೆ ವಲಸೆ ಹೋಗಬೇಕಾದ ಕಾರಣ ದನಕರುಗಳನ್ನು ಸಾಗಿಸಿಕೊಂಡು ಹೋಗುವುದು ಅಸಾಧ್ಯವಾದ ಕಾರಣ ಭಾರತ ದೇಶದಲ್ಲಿ ಹೆಚ್ಚಿನವರು ಅನುಸರಿಸುತ್ತಿದ್ದ ವ್ಯವಸಾಯವನ್ನು ಅವಲಂಬಿಸಿದರು. ಇವರು ವ್ಯವಸಾಯವನ್ನು ಅವಲಂಬಿಸಿಕೊಂಡರೂ ಇವರ ಜಾತಿಯ ಹೆಸರು ಹಾಲು ಒಕ್ಕಲು ಮಕ್ಕಳೆಂದೇ ಮುಂದುವರಿದುದರಿಂದ ಬ್ರಿಟೀಷ್ ಸರ್ಕಾರ ಹಾಗೂ ಸ್ವಾತಂತ್ರ್ಯದ ನಂತರ ಮದ್ರಾಸ್ ರಾಜ್ಯದವರು ಇವರನ್ನು ಯಾಧವ ಜನಾಂಗದ ಗುಂಪಿಗೆ ಸೇರಿಸಲು ಕಾರಣವಾಯಿತೆನ್ನಬಹುದು.

ಹಳೇ ಮೈಸೂರಿನ ಭಾಗದ ಗೌಡರೆಂದು ಕರೆಯುವವರು ಈ ಹಾಲು ಒಕ್ಕಲು ಮಕ್ಕಳಂತೆ ದನಕರುಗಳನ್ನು ಸಾಕಿ ಜೀವನವನ್ನು ಸಾಗಿಸುವ ಬದಲು ಹಿಂದಿನಿಂದಲೂ ವ್ಯವಸಾಯವನ್ನೇ ವೃತ್ತಿಯನ್ನಾಗಿ ಮಾಡಿಕೊಂಡದ್ದರಿಂದ ಒಕ್ಕಲಿಗರೆಂದು ಕರೆಯಲ್ಪಟ್ಟರು. ಹಾಲು ಒಕ್ಕಲು ಮಕ್ಕಳಂತೆ ಹಾಲು ಉತ್ಪತ್ತಿ ಮಾಡುತ್ತಿದ್ದ ಈಗ ಕುರುಬರೆಂದು ಕರೆಯಲ್ಪಡುವ ಹಾಲು ಮತ ಪಂಗಡದವರು ಕುರಿಗಳನ್ನೇ ಹೆಚ್ಚಾಗಿ ಸಾಕಿ ತಮ್ಮ ಬದುಕನ್ನು ಸಾಗಿಸುತ್ತಿದ್ದುದರಿಂದ ಅವರನ್ನು ಕುರುಬರೆಂದು ಕರೆದರು. ಬಹಳ ಸೂಕ್ಷ್ಮ ರೀತಿಯಲ್ಲಿ ಈ ಜಾತಿಗಳನ್ನು ಪರಿಶೀಲಿಸಿದರೆ ಗೌಡರು ಎಂಬುದಾಗಿ ತಮ್ಮ ಹೆಸರಿನ ಮುಂದೆ ಹಾಕಿಕೊಳ್ಳುವವರಲ್ಲಿ ಹಾಲು ಒಕ್ಕಲು ಮಕ್ಕಳು, ಹಾಲುಮತ, ಯಾದವ, ಗೊಲ್ಲರು, ಗೋಪಾಲ ಎಂಬ ಪಂಗಡದವರೂ ಒಕ್ಕಲಿಗರ ಪಂಗಡವಾದ ಗಂಗಡಿಕಾರ, ಕುಂಚಟಿಗ, ಮರಸ್ಸು, ನಾಮಧಾರ, ದಾಸ ಒಕ್ಕಲು, ಬಿಳ್ಳೊಡೆ ಒಕ್ಕಲಿಗರೂ ಸೇರಿದ್ದಾರೆ.

ಹಾಲು ಮಕ್ಕಳು, ಹಾಲಕ್ಕಿ ಒಕ್ಕಲ್, ಯಾದವ, ಗೊಲ್ಲರು ಇವರುಗಳಿಗೆ ಶೃಂಗೇರಿ ಜಗದ್ಗುರುಗಳೇ ನಮ್ಮಂತೆ (ಹಾಲು ಒಕ್ಕಲು ಮಕ್ಕಳಂತೆ) ಗುರುಗಳಾಗಿದ್ದಾರೆ. ಹಿಂದೆ ಒಕ್ಕಲಿಗರಿಗೂ ಶೃಂಗೇರಿ ಜಗದ್ಗುರುಗಳೇ ಗುರುಗಳಾಗಿದ್ದರು. ಆದಿ ಚುಂಚನಗಿರಿ ಮಠಾಧೀಶ್ವರರು ಒಕ್ಕಲಿಗರಿಗೆ ಈಗ ಜಗದ್ಗುರುಗಳಾಗಿದ್ದಾರೆ.

ಈ ಎಲ್ಲಾ ವಿಷಯಗಳನ್ನು ನಮ್ಮ ವಿದ್ವಾಂಸರು ಸಂಶೋಧನೆ ನಡೆಸಿದರೆ ಹೆಚ್ಚಿನ ಮಾಹಿತಿಗಳನ್ನು ಸಂಗ್ರಹಿಸಬಹುದು. ಈ ರೀತಿ ವಿಶ್ಲೇಷಣೆ ನಡೆಸುತ್ತಾ ಹೋದಾಗ ಹಳೆ ಮೈಸೂರಿನ ಕಡೆ ಕಾಣಸಿಗುವ ಒಕ್ಕಲಿಗರಿಗೂ ಕೊಡಗು ಮತ್ತು ದ. ಕ. ಜಿಲ್ಲೆಗಳ "ಗೌಡ"ರಿಗೂ ಯಾವುದಾದರೂ ರೀತಿಯಲ್ಲಿ ರಕ್ತ ಸಂಬಂಧ ಇದೆಯೋ ಎಂಬುದನ್ನು ಕಂಡುಹಿಡಿಯಬಹುದು. ದ. ಕ. ಮತ್ತು ಕೊಡಗಿನಲ್ಲಿರುವ ಗೌಡರು ಅರೆ ಭಾಷೆ ಮತ್ತು ದಕ್ಷಿಣ ಕನ್ನಡ ಜಿಲ್ಲೆ ಗೌಡರು ಅರೆ ಭಾಷೆ ಮತ್ತು ತುಳು ಭಾಷೆಯನ್ನು ಆಡಿದರೆ ಹಳೇ ಮೈಸೂರಿನ ಒಕ್ಕಲಿಗರು ಪ್ರತ್ಯೇಕ ರೀತಿಯ ಗ್ರಾಮ್ಯ ಕನ್ನಡವನ್ನು ಆಡುತ್ತಾರೆ. ಅಲ್ಲದೆ ಕೊಡಗು ಹಾಗೂ ದ. ಕ. ದಲ್ಲಿರುವ ಗೌಡರ ಗೋತ್ರ (ಬಳಿ)ಗಳಿಗೂ ಹಳೇ ಮೈಸೂರಿನ ಒಕ್ಕಲಿಗರ ಗೋತ್ರ (ಬಳಿ)ಗಳಿಗೂ ವ್ಯತ್ಯಾಸವಿದೆ.

ಆದ್ದರಿಂದ "ಗೌಡ"ರೆಂದು ಕರೆಯುವವರೆಲ್ಲರೂ ಒಂದೇ ಸ್ಥಳದಿಂದ ಬಂದವರೆನ್ನಬಹುದು. "ಗೌಡ" ಎನ್ನುವುದು ಒಂದು ಪ್ರದೇಶ ಯಾ ಸ್ಥಳದ ಹೆಸರಲ್ಲದೆ ಜಾತಿಯ ಹೆಸರಲ್ಲ. ಉದಾಹರಣೆಗೆ ಬ್ರಿಟೀಷರು ಎಂದರೆ ಬ್ರಿಟನ್ ದೇಶಕ್ಕೆ ಸೇರಿದವರು. ಜರ್ಮನರು ಅಂದರೆ ಜರ್ಮನ್ ದೇಶಕ್ಕೆ ಸೇರಿದವರು. ಪಾರ್ಶಿಗಳು ಪರ್ಷ್ಯ ದೇಶಕ್ಕೆ ಸೇರಿದವರು. ಅದೇ ರೀತಿ "ಗೌಡ"ರೆಂದು ಕರೆಯುವವರೆಲ್ಲ "ಗೌಡ" ದೇಶಕ್ಕೆ ಸೇರಿದವರೆಂದು ಹೇಳಬಹುದು. ಆದರೆ ಇವರ ಜಾತಿ ಹೆಸರು, ಹಾಲು ಒಕ್ಕಲು ಮಕ್ಕಳು, ಹಾಲಕ್ಕಿ ಒಕ್ಕಲ್, ಗಂಗಡಿಕಾರ, ಬಿಳ್ಳೊಡೆ, ಕುಂಚಟಿಗರು, ಮರಸು, ನಾಮಧಾರಿ, ದಾಸ ಒಕ್ಕಲು, ಯಾಧವ, ಗೊಲ್ಲ ಗೋಪಾಲ ಎಂಬುವರೂ "ಗೌಡ" ಎಂಬುದಾಗಿ ಅವರ ಹೆಸರಿನ ಮುಂದೆ ಹಾಕಿಕೊಳ್ಳುತ್ತಾರೆ.

ಗ್ರಂಥ ಋಣ

1. ಕರ್ನಾಟಕ ಸಂಸ್ಕೃತಿ ದರ್ಶನ ಪೂರ್ವ ಪೀಠಿಕೆ
2. ಹಾಲು ಮತ - ಡಾ॥ ಶಂ. ಬಾ. ಜೋಷಿ
3. ಕೊಡಗಿನ ಇತಿಹಾಸ ಡಿ. ಎಸ್. ಕೃಷ್ಣಯ್ಯ
4. ಕೃಷ್ಣರಾಯ ತ್ರಿವಿಕ್ರಮ.

ಲೇಖಕರು : ಪ್ರೊ. ಪೂಜಾರಿ ಮೊಣ್ಣಪ್ಪ



# ಗೌಡ ಮತ್ತು ಒಕ್ಕಲಿಗರ ಗೋತ್ರ ಹಾಗೂ ಪದ್ಧತಿಗಳ ಸೂಕ್ಷ್ಮ ಪರಿಚಯ

**ಗೌಡರು**

1. ಇವರು ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಇದ್ದಾರೆ.
2. ಇವರಲ್ಲಿ ಉಪಜಾತಿಗಳಿಲ್ಲ.
3. ಇವರಿಗೆ ಹದಿನೆಂಟು ಗೋತ್ರಗಳಿವೆ.
4. ಇವರು ಅರೆಭಾಷೆ ಮತ್ತು ತುಳು ಭಾಷೆಯನ್ನಾಡುತ್ತಾರೆ.
5. ಇವರ ಮನೆ ದೇವರು ಶ್ರೀ ವೆಂಕಟರಮಣ ಸ್ವಾಮಿ ಹರಿಸೇವೆ ಕಾಲದಲ್ಲಿ ಕೆಂಚುರಾಯನ ಪೂಜೆಯನ್ನು ಮಾಡುತ್ತಾರೆ. ಇದಲ್ಲದೆ ಸಬ್ಬಮ್ಮ, ದುರ್ಗಿ, ಚಾಮುಂಡಿ ಮುಂತಾದ ದೇವತೆಗಳನ್ನು ಪೂಜಿಸುತ್ತಾರೆ.
6. ಇವರು ಧಾರಾ ಪದ್ಧತಿಯ ವಿವಾಹ ಮಾಡುತ್ತಾರೆ.
7. ಇವರು ವಯಸ್ಕರು ಸತ್ತರೆ ಸುಡುತ್ತಾರೆ, ಮಕ್ಕಳು ಸತ್ತರೆ ಹೂಳುತ್ತಾರೆ.

**ಗಂಗಡಿಕಾರ ಒಕ್ಕಲಿಗರು**

1. ಇವರು ಮೈಸೂರು ಮಂಡ್ಯ, ಬೆಂಗಳೂರು, ತುಮಕೂರು, ಹಾಸನ, ಚಿಕ್ಕಮಗಳೂರು, ಶಿವಮೊಗ್ಗ ಜಿಲ್ಲೆಗಳಲ್ಲಿ ಇದ್ದಾರೆ.
2. ಇವರಲ್ಲಿ ಉಪಜಾತಿಗಳಿವೆ.
   - ಅ. ಪೆಟ್ಟಿಗೆಯವರು
   - ಆ. ಬುಜ್ಜಣಿಗೆಯವರು ಮತ್ತು ಬುಜ್ಜಣುಗೆಯವರು
3. ಇವರ ಮನೆದೇವರು ಆದಿಚುಂಚನಗಿರಿ ಭೈರವೇಶ್ವರ ದೇವರು. ಇವರು ಶಿವನನ್ನು ವಿಷ್ಣುವನ್ನು ಪೂಜಿಸುತ್ತಾರೆ.
4. ಇವರಿಗೆ 43 ಗೋತ್ರಗಳಿವೆ.
5. ಇವರು ಸತ್ತವರನ್ನು ಹೂಳುತ್ತಾರೆ.
6. ಕನ್ನಡ ಮಾತಾಡುತ್ತಾರೆ

**ಕರೆ ಒಕ್ಕಲಿಗರು**

1. ಇವರು ಶಿವಮೊಗ್ಗ ಜಿಲ್ಲೆಯ ಸೊರಬ ಮತ್ತು ಸಾಗರ ಹಾಗೂ ಉತ್ತರ ಕನ್ನಡ ಜಿಲ್ಲೆಯಲ್ಲಿದ್ದಾರೆ.
2. ಇವರಿಗೆ 7 ಗೋತ್ರ (ಬಳಿ)ಗಳಿವೆ
3. ಇವರು ಕನ್ನಡ ಮಾತಾಡುತ್ತಾರೆ.
4. ಇವರು ವಿಷ್ಣು ಮತ್ತು ಶಿವನನ್ನು ಪೂಜಿಸುತ್ತಾರೆ. ಅಲ್ಲದೆ ವೆಂಕಟರಮಣಸ್ವಾಮಿಯನ್ನು ಪೂಜಿಸುತ್ತಾರೆ.
5. ಇವರು ಸತ್ತವರನ್ನು ಹೂಳುತ್ತಾರೆ. ಇವರಿಗೆ ಅಟ್ಟೆ ಒಕ್ಕಲು ಎಂಬ ಇನ್ನೊಂದು ಉಪಜಾತಿ ಇದೆ.

**ಮರಸ್ಸು ಒಕ್ಕಲಿಗರು**

1. ಇವರು ಬೆಂಗಳೂರು, ಕೋಲಾರ ಜಿಲ್ಲೆಗಳಲ್ಲಿ ಇದ್ದಾರೆ.
2. ಇವರಿಗೆ 73 ಗೋತ್ರಗಳಿವೆ.
3. ಇವರು ಕನ್ನಡ ಮತ್ತು ತೆಲಗು ಮಾತಾಡುತ್ತಾರೆ.
4. ಇವರ ಮನೆ ದೇವರು ಪೊಟಾಲಮ್ಮ.
5. ಇವರು ಸತ್ತವರನ್ನು ಹೂಳುತ್ತಾರೆ.

**ಹಳ್ಳಿಕಾರ ಒಕ್ಕಲಿಗರು**

1. ಇವರು ತುಮಕೂರು ಜಿಲ್ಲೆಯ ಶಿರ, ಬೆಂಗಳೂರು, ಮೈಸೂರು ಹಾಸನ, ಜಿಲ್ಲೆಗಳಲ್ಲಿ ಇದ್ದಾರೆ.
2. ಇವರಿಗೆ 9 ಗೋತ್ರಗಳಿವೆ.
3. ಇವರು ಕನ್ನಡ ಮಾತಾಡುತ್ತಾರೆ.
4. ಇವರು ವಿಷ್ಣುವನ್ನು ನರಸಿಂಹ, ಎಲ್ಲಮ್ಮ, ಹುಚಾಪುರದಮ್ಮ, ಮಾಸ್ತಮ್ಮ ದೇವರುಗಳನ್ನು ಪೂಜಿಸುತ್ತಾರೆ. ಇವರು ವಿಜಯ ನಗರದಿಂದ ಬಂದವರು.
5. ಇವರಲ್ಲಿ ಹಳೆ ಹಳ್ಳಿಕಾರರು ಹೊಸ ಹಳ್ಳಿಕಾರರೆಂಬ ಉಪಜಾತಿಗಳಿವೆ.
6. ಇವರು ಕನ್ನಡ ಮಾತಾಡುತ್ತಾರೆ.
7. ಇವರು ಸತ್ತವರನ್ನು ಹೂಳುತ್ತಾರೆ.

**ಕುಂಚಟಿಗ ಒಕ್ಕಲಿಗರು**

1. ಇವರು ತುಮಕೂರು ಮತ್ತು ಬೆಂಗಳೂರು ಜಿಲ್ಲೆಗಳಲ್ಲಿ ಇದ್ದಾರೆ.
2. ಇವರಿಗ 72 ಗೋತ್ರಗಳಿವೆ.
3. ಇವರು ಕನ್ನಡ ಮಾತಾಡುತ್ತಾರೆ.
4. ಇವರು ಶಿವನನ್ನು ವಿಷ್ಣುವನ್ನು ಮತ್ತು ಹಲವಾರು ಮನೆ ದೇವತೆಗಳನ್ನು ಪೂಜಿಸುತ್ತಾರೆ.
5. ಇವರು ಸತ್ತವರನ್ನು ಹೂಳುತ್ತಾರೆ.

**ನಾಮಧಾರಿ ಗೌಡರು**

1. ಇವರು ಶಿವಮೊಗ್ಗ ಜಿಲ್ಲೆ ಚಿಕ್ಕಮಗಳೂರು, ಹಾಸನ, ಮಂಡ್ಯದ ನಾಗಮಂಗಲ, ಮೈಸೂರು ಜಿಲ್ಲೆಗಳಲ್ಲಿ ಇದ್ದಾರೆ.
2. ಇವರು ಕನ್ನಡ ಮಾತಾಡುತ್ತಾರೆ.
3. ಇವರು ವೈಷ್ಣವರು ವಿಷ್ಣುವಿನ ಅವತಾರದ ದೇವತೆಗಳನ್ನು ಪೂಜಿಸುವರು.

**ಕೊಡಗಿನ ಒಕ್ಕಲಿಗ ಗೌಡರು**

1. ಇವರು ಸೋಮವಾರ ಪೇಟೆ ತಾಲೋಕಿನ ಮೂದರವಳ್ಳಿ, ಕುಂದಳ್ಳಿ, ಶಾಂತಳ್ಳಿ, ಗೌಡಳ್ಳಿಯಲ್ಲಿದ್ದಾರೆ.
2. ಇವರು ಕನ್ನಡ ಮಾತಾಡುತ್ತಾರೆ.
3. ಇವರ ಮನ ದೇವರು ದೊಡ್ಡಯ್ಯ, ಬೇಲೂರಿನ ಚನ್ನಕೇಶವ, ಶಾಂತಳ್ಳಿಯ ಕುಮಾರಲಿಂಗ.
4. ಇವರು ಸತ್ತವರನ್ನು ಹೂಳುತ್ತಾರೆ.

**ಗೋತ್ರ ಯಾ ಬಳಿಗಳು**

**ಅರೆಭಾಷೆ ಗೌಡರು – 18 ಗೋತ್ರಗಳು**

ಸಂದರ, ಹೆಮ್ಮಾನ, ಕಬರ್, ಚಾಲ್ಯರ, ಸೆಟ್ಟಿ, ಮುಲಾರ್, ಬಂಗಾರ, ಗೌಡ, ಗೋಳಿ, ಸಾಲೆ, ಬಳಸನ್ನ, ಕರ್ಬನ್ನ, [illegible], ನಾಯರ್, ಕರಿಂಚಿರ್, ಬೆತ್ತೇರ್, ಗುಂಡರ, ಲಿಂಗ[illegible].

♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣

### ಗಂಗಡಿಕಾರ ಒಕ್ಕಲಿಗರು – 43 ಗೋತ್ರಗಳು

ಅಲವಿ, ಆಮೆ, ಆವಿ, ಬಚ್ಚಲು, ಬೆಳ್ಳಿ, ಚಂದ್ರ, ಚಿನ್ನದ, ಎಮ್ಮೆ, ಗುಡಿ, ಹೆಬ್ರು, ಹೂವು, ಕಳ್ಳಿ, ಕಸ್ತೂರಿ, ಕೊಮ್ಮೆ, ಕೋಪೆ, ಮಣಿ, ಮುಚ್ಚದ, ಸಮೆ ತೆನೆ, ವಾಲೆ, ಅನ್‌ಚೆ, ಅತ್ತಿ, ಆಯ್ಯಲು, ಬಲಮೆ, ಬರಲು, ಛತ್ರಿ, ಚಾದಲ ಬಂದ್ರ, ಏಣಿ, ಹಸುಬೆ, ಬೆರಳು, ಹೊಂಗೆ, ಕಜಾಯ, ಕುಂಬ, ಕುಲು, ಕೊಚ್ಚೆ, ಕೊಟ್ಟೆ, ಮದನ, ಮಲ್ಲಿಗೆ, ಮಾಟು, ಮುಟ್ಟು, ಸಾವಂತಿ, ಉಮ್ಮರ, ವಲ್ಲಿ

### ಕರೇ ಒಕ್ಕಲಿಗರು – 7 ಗೋತ್ರಗಳು

ಅರಸಿನ, ಚೆಂಡಿ, ಹೊನ್ನೆ, ಶೆಟ್ಟಿ, ಮಿಗನ್, ಶಿರೆ, ವಡ್ಕ

### ಮರಸ್ಸು ಒಕ್ಕಲಿಗರು – 73 ಗೋತ್ರಗಳು

ಅಚ್ಚಾಯತ, ಆಲದ, ಆನೆ, ಅರ್ಧರಾಣಿ, ಬಾಚಿ, ಬದಲು, ಬಗಲು, ಬಂಗಿ, ಬಲದ, ಬೆಳ್ಳಿ, ಬಿಲ್ಲಂದ್ಲ, ಬೊಳ್ಳಿಕೋಡಿ, ಬುಸಿ, ಚಲಿಂದಾಲ, ಚುಂಚು, ಚಿಕ್ಕಂಡ್ಲು, ದಾಳಿಂಬೆ, ಗೆಜ್ಜೆ, ಗೆಂಡೇರ, ಗಿಣ್ಣು, ದೇವಗನ್ನರು, ಗೋಕೆರ್ಲ್, ಗೊಂಗಾಡಿ, ಗೋರಂಟಿ, ಗುಲುಗಂಜಿ ಹಾಲು, ಹೆಗ್ಗಣ, ಹಿಪ್ಪೆ, ಹುಬ್ಬ, ಈಚಲು, ಇರಿ ಸೊಡ್ಲು, ಕಬ್ಬಡಿ, ಕಡಬ, ಕಗ್ಗಲಿ, ಕಲಿಂದಾಲ, ಕಲಿವಿ, ಕನ್ನೆ, ಕನ್ನೆಗ, ಕಪ್ಪು, ಕುರೆ, ಕೋಚಾರ, ಕೋಡೆ, ಕಲಗಿ, ಕೊಮ್ಮೆ, ಕೋಲಗ, ಕೊಂಡದ, ಕುಂಚಿ, ಕುಂಚಿದಾರೆ, ಕುರಟಿಗೆ ಕೂರಿಗೆ, ಮಲ್ಲಿಗೆ, ಮಂಡಿ, ವೈನೇಂದ್ರ, ಮಂಡಲಿಗೆ, ಮಸಿ, ಮಾವು, ಮೇಕಲ, ಮುದ್ರೆ, ಮದುರಂಗಿ, ಮಂಗಲಿ, ಮುತ್ತಗ, ನೆಕ್ಕುಳು, ನೆಲ್ಲಿ, ನೇರಳೆ, ನೀಲಿ, ನೆಟ್ಟವ, ನುಗ್ಗಿ, ಮನಬಡಗಿ, ಬಟ್ಟು, ಪಾಚಕೋಡಿ, ಸಮಟಿಗೆ, ಸಂಪಿಗೆ, ಸಂಕ.

### ಕುಂಚಿಟಿಗ ಒಕ್ಕಲಿಗರು – 72 ಗೋತ್ರಗಳು

ಅರಸಿಮೇರು, ಜೇನುಕುಳ್ಳರು, ಅಂಡೆದವರು, ಕಂಬಳಿಯವರು, ಪಾಯೇರು, ಎಲಿಯೋರು, ಅಲ್ಸೆಯೋರು, ಅಲೆಯೋರು, ಈರಡಿಕೆರೆಯವರು, ಸೂರೆಯೋರು, ಅಚ್ಚೆಯೋರು, ಹಾವಿನವರು, ಜಿಲ್ಡೆಯವರು, ರಾಗೆನವರು, ಅರಲೆಯವರು, ಗರಿಕೆಯವರು, ಸಾರಂಗದವರು, ಜಿಲ್ಲೆಯೋರು, ಶಾಸ್ತ್ರದೋರು, ಗುಡಿಯೋರು, ಹುತ್ತದವರು, ಗುಡಿಯೋರು, ರಾಹುತದವರು, ದಾಸಲೇಯವರು, ಕೊಗ್ಗೆಯೋರು, ಮನಸೋರು, ವಾನಮನೋವರು, ಅಲವಿನವರು, ಧನ್ಯದವರು, ಕರಡೇನವರು, ಅಂಡೇನೋರು, ಬೆಳ್ಳೆನೋರು, ಜೀರಿಗೆಯವರು, ಬಸಲೇನವರು, ಎಮ್ಮೆನವರು, ಈರೋರು, ಹುಲಿಯವರು, ಗಾಳಿಯವರು, ಬಡುವನೋರು, ಜರಿಯವರು, ಖಿಡುನವರು, ಜೇನುಕಳ್ಳರು, ಎರಡು ಕೆರೆಯವರು, ಸಲ್ಲೆಯವರು, ಹಲ್ಲೆನೋರು, ಕೋತಗೆರೆಯವರು, ಕೂಡ್ಲೆಯವರು, ಮಾನ್ಯದವರು, ಹುಲಿ ಎರದವರು, ಮಾನ್ಯದವರು ಹುಲಿಯೂರದವರು, ಶೆಟ್ಟಿನವರು, ಕುರೇನವರು, ಜಕ್ಕನವರು, ಹಚ್ಚಿನವರು, ಕೆಂಪನೆಯವರು, ಕಲ್ಲದವರು, ಕೋಡೆ ಚಲ್ಲಿಯವರು, ಹುತ್ತದವರು, ನಿಂಬೆನವರು, ತಂಡೆನವರು, ದೇವರುನವರು, ಜಲ್ಡೆಯವರು, ಕಲ್ಲು ಕುಂಟಿಯವರು, ಸಾಕುವಲ್ಲೆಯವರು, ಹಲ್ಲೆಕುಟಿಯವರು, ಹೊಲ್ಲ ಕಲ್ಲೆರು, ಕೋಡೆ ಗೆರೆಯವರು.

ಲೇ. ಪ್ರೊ. ಪೂಜಾರಿ ಮೊಣ್ಣಪ್ಪ
ಬೆಂಗಳೂರು

♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣

## ಗಾನಶ್ರೀ

ಒಂದ್ ಹೋಟ್ಲ್‌ಗೆ ಒಬ್ಬ ಚಾ ಕುಡಿಯಕೆ ಹೋದೆ. ಆ ಹೋಟ್ಲ್‌ಲಿ ಕಾಫಿ, ಚಾಕ್ಕೆ ಸಕ್ಕರೆ ಹಾಕದೆ ಸಕ್ಕರೆನ ಒಂದ್ ಗ್ಲಾಸ್‌ಲಿ ತಂದಿಡುವ ಕ್ರಮ. ಇವ ಅವಸರಕ್ಕೆ ಸಕ್ಕರೆ ಹಾಕಣದೆ ಚಾ ಕುಡ್ತ್. ಆಮೇಲೆ ಅವಂಗೆ ಗೊತ್ತಾತ್. ಗ್ಲಾಸ್‌ಲಿ ಸಕ್ಕರೆ ಇತ್ತ್‌ತ. ಸಕ್ಕರೆ ಕಂಡಕೂಡ್ಲೆ ಆ ಗ್ಲಾಸ್‌ಲಿದ್ದ ಸಕ್ಕರೆನೆಲ್ಲಾ ಇಂವ ತಿಂದ್ ಅಲ್ಲೆ ನೆಲಲಿ ಹೊಣ್ ಕ್ಯಾಡಿಕೆ ಸುರ್ ಮಾಡ್ತ್. ಅದರ ಕಂಡ್ ಮೇನೇಜರ್ ಭವಿಷ್ಯ ಹಾಲ್‌ಲಿ ಏನೋ ಬಿದ್ದಿರೊಕು ಇಂವ ಸತ್ತರೆ ಮತ್ತೆ ನಮ್ಮ ಮೇಲೆ ಕೇಸ್ ಆದುಂತಾ ಗ್ರಹಿಸಿ ಹೋಟ್ಲ್‌ಲಿ ಇರುವ ಹಾಲ್‌ನೆಲ್ಲಾ ಚರ್‌ಂಡಿಗೆ ಚೆಲ್ಲಿತ್. ಅಷ್ಟೋತ್ತಾಕನ ಹೊಣ್ಕ್‌ದ್ದಿಂವ ಎದ್ದ್ ಲಾಯಿಕಲಿ ಕುದ್ದತ್ತ್. ಮೇನೇಜರ್ ಹೋಗಿ ಕೇಳ್ತ್ "ನೀನ್ ನೆಲಲ್ ಹೊಣ್ಣ್ಕಂಡಿದ್ದಲ? ನಿಂಗೆ ಏನಾಗಿತ್ತ್? ಈಗ ಸರಿ ಆತಾ? ಹಂಗೆ ಕೇಳ್‌ಕನ ಇಂವ ಹೇಳ್ತ್ ನಂಗೆ ಏನೂ ಆಗಿತ್ತ್‌ಲೆ ನಾ ಚಾ ಕುಡಿಯಕನ ಅದ್‌ಕ್ಕೆ ಸಕ್ಕರೆ ಹಾಕಿಕೆ ಮರ್ತೋಗಿತ್, ಅದ್ಕೆ ಚಾ ಕುಡ್ದ ಮೇಲೆ ಸಕ್ಕರೆ ತಿಂದೆ. ಚಾದೊಟ್ಟಿಗೆ ಸಕ್ಕರೆ ಸೇರಲೀತ ನೆಲಲಿ ಹೊಣ್‌ಕ್ ತಿದ್ದೆ ಅಷ್ಟೆ. ಹಿಂಗೆ ಹೇಳ್‌ಕನ ಮೇನೇಜರ್‌ಗೆ ಬಾರಿ ಆಶ್ಚರ್ಯ ಆತ್.

ಮುಳಿಯಂಡ್ರ ಚೈತ್ರ ಈರಪ್ಪ
ಯವಕಪಾಡಿ.

## ತಾತ ಸುಸ್ತ್ ಗಡಾ !

ನಮ್ಮ ತಾತನ ಕಾಲಲಿ ಭಾರೀ ಜೋರ್‌ಲಿ ಇದ್ದೋ ಗಡಾ ! ಆಗ ಸೂಟ್ ಹಾಕಿದವಂಗೆ ಭಾರೀ ಬೆಲೆ ಗಡಾ !

ಸೋಂಪಣ್ಣ ಎದ್ದ್ ಕಾಣ್ತದ್ದಂವ ಗಡಾ ! ಹಂಗಾಗಿ ಒಳ್ಳೆ ಲಾಯಿಕ್‌ನ, ಓದಿದ ಗೂಡೆನ ಬಲೆಗೆ ಹಾಕಿಕಣ್ತ್ ಗಡಾ ! ಗೂಡೆನ ಮನೆವು ಲಗ್ನ ಕಟ್ಟಿಗೆ ಬಾಕೆ ಹೇಳ್ದೊ. ತಾತ ಮತ್ತೆ ತಿಮ್ಮ ಸೋಂಪಣ್ಣನ ಸ್ನೇಹಿತರ್‌ಗ ಆದರ್‌ಂದ ಇವರ್‌ನ ಸನಕರ್ತ್ ಗಡಾ ! ನಮ್ಮ ತಾತ ಹೋಗಿ ಖುಷೀಲಿ ಆ ಪೊರ್ಲುನ ನೋಡ್ತ್ ಗಡಾ ! ಸೋಂಪಣ್ಣಂಗೆ ದೃಷ್ಟಿ ಆಗುವಂಗೆ ಇತ್ತ್ ಗಡಾ ! ತಾತಂಗೆ ತಿಮ್ಮ ಬಾರದ್ದಕ್ಕೆ ತುಂಬಾ ಬೇಜಾರಾತ್ ಗಡ. ಕಳ್ಳ್ ಚಾಪೆಗೆ ಹೋಕಾನ ತಿಮ್ಮು ಅಲ್ಲಿ ಉಟ್ಟುಗಡ. ತಾತ ಅವನ ಕೇಳ್ತ್, ನೀ ಎಂಥಾ ಚಾನ್ಸ್ ಕಳ್ಕಂಡ? ಸೋಂಪಣ್ಣ ಹೆಂಗೆ ಕಾಣ್ತತ್ತ್ ಗೊತ್ತುಟತ ಹೇಳ್ಕನ ತಿಮ್ಮ ಹೇಳ್ತ್ ಗಡಾ ! ಅದ್ಕನೆ ನಾ ಬಾರದ್. ಪಾಪ ತಿಮ್ಮುದ್ ಸೂಟ್ ಹಾಕಿ ಸೋಂಪಣ್ಣ ಮಜಾ ಮಾಡ್ತ್. ಬಂದವರೊಟ್ಟಿಗೆಲ್ಲ ನಾ ಹೆಂಗೆ ಕಂಡನೆತೇಳಿ ಕೇಳಿತ್ತ್ ಗಡಾ ! ಅಂದರೂ ಗೊತ್ತಾಗದ ನಮ್ಮ ತಾತ, ತಿಮ್ಮ ನಿಜ ಸಂಗತಿ ಹೇಳ್ಕನ ಸುತ್ತ್ ಆತ್ ಗಡಾ !

ದೀಪಾ
ಕೊಡಗು

♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣♣

## ಶುಭ ಹಾರೈಕೆ



ಎಂ. ಕೆ. ಸೌಮ್ಯ

ಕು. ಸೌಮ್ಯ 1997-98ರ ಸಾಲಿನ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಒಟ್ಟು 625ಕ್ಕೆ 584 ಅಂಕಗಳನ್ನು ಪಡೆದು (93.44%) ಬೆಂಗಳೂರಿನ ಜಯನಗರದ 3ನೇ ಬ್ಲಾಕಿನಲ್ಲಿರುವ ದಿ. ಕಮ್ಯುನಿಟಿ ಸೆಂಟರ್ ಕಾಂಪೋಸಿಟ್ ಜೂನಿಯರ್ ಕಾಲೇಜಿಗೆ ಪ್ರಥಮ ಸ್ಥಾನ ಪಡೆದು ಕೀರ್ತಿ ತಂದಿರುತ್ತಾಳೆ. ತಂದೆ ಶ್ರೀ ಎಂ. ಕೊರಗಪ್ಪ ಗೌಡರು, ಮು.ಶಿ.ಸ.ಹಿ.ಪ್ರಾ.ಶಾಲೆ, ಚುಂಚಘಟ್ಟ, ಬೆಂಗಳೂರುನಲ್ಲೂ, ತಾಯಿ ಎನ್. ಲಕ್ಷ್ಮೀದೇವಿ, ಪ್ರ.ದ.ಸಹಾಯಕಿ, ಇ.ಎಸ್.ಟಿ.ಶಾಲೆ, ಆಯುಕ್ತರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರಿನಲ್ಲೂ ಕಾರ್ಯನಿರ್ವಹಿಸುತ್ತಿದ್ದಾರೆ. ಎಸ್.ಎಸ್.ಎಲ್.ಸಿ. ರ್‍ಯಾಂಕ್ ಪಟ್ಟಿಯ ಗಡಿಯಂಚಿನಲ್ಲಿ ಕೂದಲೆಳೆ ಅಂತರದಲ್ಲಿ ವಂಚಿತರಾದ ಇವರು ಈಗ ಎರಡನೇ ಪಿ.ಯು.ಸಿ. (ಪಿ.ಸಿ.ಎಂ.ಬಿ.) ಅನ್ನು ಬೆಂಗಳೂರಿನ ವಿಜಯ ಜೂನಿಯರ್ ಕಾಲೇಜ್, ಜಯನಗರದಲ್ಲಿ ಓದುತ್ತಿದ್ದು ಈ ವರ್ಷವಾದರೂ ಸತತ ಪ್ರಯತ್ನದಿಂದ ರ್‍ಯಾಂಕನ್ನು ಗಳಿಸಿ ಅರೆಭಾಷಿಕ ಲೋಕಕ್ಕೆ ಕೀರ್ತಿ ತರಲೆಂದು ಕೊಡಗು ಸಂಗಾತಿ ಮನಸ್ಫೂರ್ತಿ ಹಾರೈಸುತ್ತದೆ.

## 1998-99ರ ಸಾಲಿನ ಎಸ್. ಎಸ್. ಎಲ್. ಸಿ. ಪರೀಕ್ಷೆಯಲ್ಲಿ 60% ಕ್ಕಿಂತ ಹೆಚ್ಚು ಅಂಕ ಗಳಿಸಿದ ಗೌಡ ಪ್ರತಿಭೆಗಳು

| | ಗರಿಷ್ಠ | ಗಳಿಸಿದ್ದು | % |
|---|---|---|---|
| ಕು. ಪ್ರಣಾಮ್ S/o ಕಟ್ಟೆಮನೆ ಗಣೇಶ್, ಮರಗೋಡು | 625 | 464 | 74.24 |
| ಕು. ಜನನಿ D/o ಕಟ್ಟೆಮನೆ ಸಿದ್ಧಾರ್ಥ, ಮರಗೋಡು | 625 | 467 | 74.72 |

## ಕೃತಜ್ಞತೆ

ದಿನಾಂಕ 12-9-1999ರಲ್ಲಿ ಕಾವೇರಿನಾಡಿಲ್ಲಿ ನಡೆದಂತಹ ಕೈಲ್ ಪೋಳ್ದ್ ಹಬ್ಬ ಬಹಳ ಸೊಗಸಾಗಿತ್ತು. ಬೇರೆ ಬೇರೆ ಸಂಘಗಳನ್ನು ಕಟ್ಟಿಕೊಂಡಿರುವ ಗೌಡರನ್ನು ಒಂದೆಡೆ ಸೇರಿಸಿ ಪರಸ್ಪರ ಮಿಲನದ ರುವಾರಿ ಅಮ್ಮಾಜೀರ ಪೊನ್ನಪ್ಪ ದಂಪತಿಗಳ ಸಾಹಸ ನನಗೆ ಬರ್ಲಿನ್ ಗೋಡೆಯನ್ನು ಒಡೆದು ಎರಡು ದೇಶಗಳನ್ನು ಒಂದುಗೂಡಿಸಿದ ನೆನಪಾಯಿತು. ಇವರಿಗೆ ಅನಂತಾನಂತ ವಂದನೆಗಳು. ಇವರ ಮಹತ್ಕಾರ್ಯ, ಸಾಧನೆ, ಸಮಾಜಸೇವೆ, ಹಿರಿಯರಿಗೆ/ಕಿರಿಯರಿಗೆ ಮುಂದಿನ ಪೀಳಿಗೆಗೆಮಾರ್ಗದರ್ಶಿ ಆಗಿದ್ದು ಅವರಿಗೆ ಕಾವೇರಿ ಮಾತೆ ಮತ್ತು ಕುಲದೇವರು ಅನುಗ್ರಹ ಸದಾ ಇರಲೆಂದು ಹಾರೈಸುತ್ತೇನೆ.

**ಕಾಸ್ಪಾಡಿ ಮೋನಪ್ಪ, ಬೆಂಗಳೂರು.**

## ಎರಡನೇ ವರ್ಷದ ಪುಣ್ಯತಿಥಿಯ ಸ್ಮರಣೆ

ಕೆ. ಎಂ. ಚಂದ್ರಮ್ಮ



ಜನನ : 13-4-1943 ಮರಣ : 25-9-1997

ನೀನು ನನ್ನನ್ನು ಅಗಲಿ ಇಂದಿಗೆ ಎರಡು ವರ್ಷ ಕಳೆದರೂ ಸದಾ ನಿನ್ನನ್ನು ನೆನೆಸುತ್ತಾ ನಿನ್ನ ಆತ್ಮವು ಸದಾ ಚಿರಶಾಂತಿಯಿಂದ ಕೂಡಿರಲಿ ಎಂದು ಹಾರೈಸುತ್ತಿರುವ

**ಪತಿ : ಎಂ. ರಾಮೇಗೌಡ,**

ವಿಳಾಸ : 1019/ಎ, 9ನೇ ಮುಖ್ಯ ರಸ್ತೆ, 3ನೇ ಹಂತ,
ಗೋಕುಲಂ, ಮೈಸೂರು 570 002. ಟೆಲಿಫೋನ್ : 512049

## ಕಂಬನಿ



ಎಂ. ಎಸ್. ಶಾಂತಿ

ಜನನ : 1-6-1972 ಮರಣ : 24-9-1998

ನೀನು ನಮ್ಮನ್ನಗಲಿದರೂ ನಿನ್ನ ನೆನಪು ನಮ್ಮ ಹೃದಯಾಂತರಾಳದಲ್ಲಿ ಸದಾ ಹಸಿರಾಗಿಯೇ ಉಳಿದಿದೆ. ಅರಳುವ ಮುನ್ನವೇ ಹೂವು ಬಾಡಿಹೋದಂತಾಯಿತು ನಿನ್ನ ಬಾಳು; ಎಂಬುದನ್ನು ನೆನಪಿಸಿದಾಗಲೆಲ್ಲಾ ಕಂಬನಿ ಮಿಡಿಯುತ್ತಿದೆ.

ಕೊಡಗು ಜಿಲ್ಲೆಯ ಮರಗೋಡಿನ ಹೊಸ್ಕೇರಿ ಗ್ರಾಮದಲ್ಲಿ ದಿ. ನಂಜಪ್ಪ ಮತ್ತು ದಿ. ನೀಲಮ್ಮನವರ ಪಂಚಮ ಪುತ್ರಿಯಾಗಿ ಜನಿಸಿದ ನೀನು ದೈವಾಧೀನವಾಗಿ 1998ನೇ ಸೆಪ್ಟೆಂಬರ್ 24ನೇ ದಿನ ನಮ್ಮ ಸ್ಮೃತಿಪಟಲದಿಂದ ಅಳಿಸಲಾರದ ಕಪ್ಪುಚುಕ್ಕೆಯಾಗಿದೆ. ಅದಾಗಿ ಒಂದು ವರ್ಷ ಕಳೆದು ಬಂದ ಆ ದಿನದಂದು ನಿನ್ನ ಆತ್ಮಕ್ಕೆ ಶಾಂತಿ ಕೋರುವ,

ಚೆಯ್ಯಂಡಿರ ಪಾಲಿ ಮತ್ತು ಮಕ್ಕಳು, ಮಕ್ಕಂದೂರು
ಟಿ. ಕೆ. ನಾಗರಾಜ್ ಮತ್ತು ಕುಟುಂಬಸ್ಥರು, ಚೆನ್ನಪಟ್ಟಣ
ಯಂಕನ ಲಕ್ಷ್ಮಣ ಮತ್ತು ಮಕ್ಕಳು, ಸುಂಟಿಕೊಪ್ಪ
ಕದಂಬಡ್ಕ ಎ. ಉತ್ತಯ್ಯ ಮತ್ತು ಕುಟುಂಬಸ್ಥರು.
ಮುಕ್ಕಾಟೀರ ಎನ್. ರವಿ ಮತ್ತು ಕುಟುಂಬಸ್ಥರು
ಬಂಧುಮಿತ್ರರು ಹಾಗೂ ಬಳಗದವರು.

## ಗೌಡ ವನಿತೆಯರಿಂದ ಮೈಸೂರಿನಲ್ಲಿ ಕೈಲ್ ಪೋಳ್ದ್ ಹಬ್ಬ

ಮೈಸೂರಿನಲ್ಲಿ ವಾಸಿಸುವ ಕೊಡಗು ಮತ್ತು ಕನ್ನಡ ಜಿಲ್ಲಾ ವನಿತೆಯರು ದಿನಾಂಕ 10-10-1999ರ ಭಾನುವಾರ ದಿವಸ ಮೈಸೂರಿನ ಜಯಲಕ್ಷ್ಮಿಪುರಂನಲ್ಲಿರುವ ಕೊಡಗು ಗೌಡ ವಿದ್ಯಾರ್ಥಿ ನಿಲಯದಲ್ಲಿ ಪೂರ್ವಾಹ್ನ 11 ಗಂಟೆಗೆ ಆಚರಿಸಲು ನಿರ್ಧರಿಸಲಾಗಿದೆ. ಅಂದು ಆಟೋಟಗಳ ಸ್ಪರ್ಧೆಗಳು ಮತ್ತು ಊಟದ ವ್ಯವಸ್ಥೆಯು ಇರುತ್ತದೆ. ಆದ್ದರಿಂದ ಸಂಘದ ಸದಸ್ಯರು ತಮ್ಮ ಇಷ್ಟಮಿತ್ರರೊಡಗೂಡಿ ಸಮಯಕ್ಕೆ ಸರಿಯಾಗಿ ಬಂದು ಯಶಸ್ವಿಯಾಗಿ ನಡೆಯಿಸಿ ಕೊಡುವಂತೆ ವಿನಂತಿ.

ಜನಾಂಗದ ಸರ್ವರಿಗೂ ಆದರದ ಸುಸ್ವಾಗತ

ಅಧ್ಯಕ್ಷರು, ಕಾರ್ಯದರ್ಶಿ, ಆಡಳಿತ ಮಂಡಳಿಯವರು
ಕೊಡಗು ಮತ್ತು ದ. ಕ. ಜಿಲ್ಲಾ ಮಹಿಳಾ ಒಕ್ಕೂಟ, ಮೈಸೂರು.

**Kodagu Sangathi** Kannada Fortnightly Edited, Published, Printed & Owned by Pattada P. Sheelamani, No. 35, Savitha Nilaya, I Cross, 4th Block, **Jayalaxmipuram, Mysore - 12.** And **SANGATHI** Office ✆ : **0821/516771.** And Printed at Sri Guru Raghavendra Printers, 489, Devamba Agrahara, K. R. Mohalla, Mysore - 24. ✆ : 0821/431792.